**ಶರತ್ ಎಚ್.ಕೆ.**

ಹುಟ್ಟಿದ್ದು ಹಾಸನದಲ್ಲಿ. ಓದಿದ್ದು ಹಾಸನದ ಮಲೆನಾಡು ಎಂಜಿನಿಯರಿಂಗ್ ಕಾಲೇಜಿನಲ್ಲಿ ಬಿ.ಇ. ಹಾಗು ಎಂ.ಟೆಕ್. ಈಗ ಅದೇ ಕಾಲೇಜಿನಲ್ಲಿ ಸಹಾಯಕ ಪ್ರಾಧ್ಯಾಪಕನಾಗಿ ಕಾರ್ಯನಿರ್ವಹಣೆ.  'ಮೊದಲ ತೊದಲು', 'ಬೆಳಕಿನ ಬೇಲಿ' ಹಾಗು 'ಗೋಡೆಗಳ ನಡುವೆ...' ಪ್ರಕಟಿತ ಕೃತಿಗಳು.

✉: hksharu@gmail.com

***Khushalopari -*** Collection of articles written by Sharath H.K.
***Published by*** Prajodaya Prakashana, Behind Sandal Koti, K.R.Puram, Hassan, Karnataka-573201

ಪ್ರಕಟಣೆ: 2017

ಪುಟಗಳು: 47

ಬೆಲೆ: ₹ 20



ಮುಖಪುಟ ಚಿತ್ರ: ನಿಖಿಲ್ ಪಿ.

ವಿನ್ಯಾಸ: ಶರತ್ ಎಚ್.ಕೆ.

ISBN: 978-1-365-67972-8

**ಪ್ರಕಾಶಕರು**

ಪ್ರಜೋದಯ ಪ್ರಕಾಶನ

ಗಂಧದ ಕೋಠಿ ಹಿಂಭಾಗ, ಗೋಕುಲ್ ಹೋಟೆಲ್ ರಸ್ತೆ,

ಕೆ.ಆರ್.ಪುರಂ, ಹಾಸನ-573201

☎: 8792276742 ✉: prajodayaprakashana@gmail.com

**ಆನ್ ಲೈನ್ ಅಂಗಡಿ:**

www.instamojo.com/prajodaya

## ಅರ್ಪಣೆ

ಮೌನದ ಮೂಲಕವೇ ಮಾತು ದಾಟಿಸಬಲ್ಲವರಿಗೆ...

## ಏನಿದು 'ಕುಶಲೋಪರಿ'?

'ಇ-ಪುಸ್ತಕ'ವಾಗಿ ನನ್ನ ಬರಹಗಳನ್ನು ಒಂದೆಡೆ ಪೇರಿಸಿಡುವ ನಿಟ್ಟಿನಲ್ಲಿ ಇದು ಎರಡನೇ ಪ್ರಯತ್ನ. ಒಂದು ತಿಂಗಳ ಹಿಂದೆ ಹೊರ ಬಂದ 'ಗೋಡೆಗಳ ನಡುವೆ...' ಹೆಸರಿನ ನನ್ನ ಮೊದಲ ಇ-ಪುಸ್ತಕ ಓದಿ ಪ್ರತಿಕ್ರಿಯಿಸಿದ ಹಾಗು ಹಣ ಪಾವತಿಸುವ ಮೂಲಕ ಇಂತಹ ಮತ್ತಷ್ಟು ಪ್ರಯೋಗಗಳಿಗೆ ಬೆನ್ನು ತಟ್ಟಿದ ಎಲ್ಲರಿಗೂ ಧನ್ಯವಾದ. 'ಕುಶಲೋಪರಿ' ಕೂಡ ಈ ಮೊದಲೇ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳ ಗುಚ್ಛ. ಕಿವಿಗೆ ಬಿದ್ದ ಹಾಗು ಸ್ವತಃ ನಾನೇ ಭಾಗಿಯಾದ ಮಾತುಕತೆಗಳ ಹಿನ್ನೆಲೆಯಲ್ಲಿ ರೂಪುಗೊಂಡ ಬರಹಗಳು ಇಲ್ಲಿವೆ. ಓದಿ ನಿಮ್ಮ ಅಭಿಪ್ರಾಯ ತಿಳಿಸಿ. ಇಷ್ಟವಾದರೆ ಹೇಳದಿದ್ದರೂ ಪರವಾಗಿಲ್ಲ, ಹಿಡಿಸದಿದ್ದರೆ ತಪ್ಪದೇ ಕಿವಿ ಹಿಂಡಿ!

ಮುಖಪುಟಕ್ಕೆ ಬಳಸಿಕೊಳ್ಳಲು ತಾನು ಸೆರೆ ಹಿಡಿದ ಫೋಟೊ ನೀಡಿ ಸಹಕರಿಸಿದ ನಿಖಿಲ್ ಪೂರ್ಣ ಹಾಗು ಇಲ್ಲಿನ ಬರಹಗಳನ್ನು ಪ್ರಕಟಿಸುವ ಮೂಲಕ ಪ್ರೋತ್ಸಾಹಿಸಿದ ಪ್ರಜಾವಾಣಿ, ಉದಯವಾಣಿ, ವಿಜಯವಾಣಿ, ಕನ್ನಡಪ್ರಭ, ತುಷಾರ, ಸಖಿ, ಪಂಜು ಪತ್ರಿಕಾ ಬಳಗಕ್ಕೆ ಧನ್ಯವಾದ.

- ಶರತ್ ಎಚ್.ಕೆ.

## ಒಡಲೊಳಗೆ..

# ಸೀಬೆ ಗಿಡ ಮತ್ತು ಅಮ್ಮನ ಪುಟಾಣಿ ಫ್ರೆಂಡು

ಅದ್ಯಾಕೋ ಗೊತ್ತಿಲ್ಲ, ನಮಗೂ ಪಕ್ಕದ ಮನೆಯವರಿಗೂ ಆಗಿ ಬರುತ್ತಿಲ್ಲ. ನಾವೇನು ಅವರೊಂದಿಗೆ ಜಗಳವಾಡಿಲ್ಲ. ಅವರೂ ನಮ್ಮೆಡೆಗೆ ಕಾಲು ಕೆರೆದುಕೊಂಡು ಬಂದಿಲ್ಲ. ಆದರೂ ಆ ಮನೆಗೂ ಈ ಮನೆಗೂ ಮಾತುಗಳ ವಿನಿಮಯವಾಗುವುದಿಲ್ಲ. ಆ ಮನೆಗೆ ಇದುವರೆಗೂ ನಾಲ್ಕು ಕುಟುಂಬಗಳು ಬಂದು ಹೋಗಿವೆ. ಈಗ ನೆಲೆಸಿರುವುದು ಐದನೇ ಕುಟುಂಬ. ಇದುವರೆಗೂ ಆ ಮನೆಗೆ ಬಾಡಿಗೆಗೆ ಬಂದವರಲ್ಲಿ ನಮ್ಮಮ್ಮನೊಂದಿಗೆ ಚೆನ್ನಾಗಿ ಹೊಂದಿಕೊಂಡಿದ್ದು ನಾಲ್ಕನೇ ಕುಟುಂಬ ಮಾತ್ರ.

ಈಗ ನೆಲೆಸಿರುವ ಕುಟುಂಬದಲ್ಲಿ ಮೂವರಿದ್ದಾರೆ. ಗಂಡ, ಹೆಂಡತಿ ಮತ್ತು ಸ್ಕೂಲಿಗೆ ಹೋಗುವ ಮಗು. ಪಕ್ಕದ ಮನೆಯವರನ್ನು ಫ್ರೆಂಡ್ ಮಾಡಿಕೊಳ್ಳಬೇಕೆಂಬುದು ನಮ್ಮಮ್ಮ ಮತ್ತವರ ಗೆಳತಿಯರ ಆಸೆ. ಆದರೆ ಪಕ್ಕದ ಮನೆ ಯುವತಿ ಅಪ್ಪಿ ತಪ್ಪಿಯೂ ನಮ್ಮಮ್ಮನ ಕಡೆ ಮುಖ ಹಾಕುವುದಿಲ್ಲ. ಎದುರು ಬದುರು ಸಿಕ್ಕರೂ ನಗು ಬೀರುವುದಿಲ್ಲ.

ಆ ಯುವತಿ ಮಗನ ಓದಿಗೆ ತನ್ನನ್ನು ಸಮರ್ಪಿಸಿಕೊಂಡಿರುವಂತೆ ಆಡುತ್ತಾರೆ. ಸ್ಕೂಲಿಗೋಗುವ ಹುಡುಗ ಮನೆಯಲ್ಲಿದ್ದಷ್ಟೂ ಹೊತ್ತು ಓದಬೇಕೆಂಬುದು ಅವರ ಬಯಕೆ. ಅಪ್ಪಿ ತಪ್ಪಿ ಆ ಹುಡುಗ ಟಾಯ್ಲೆಟ್ಗೆ ಹೋಗಿ ಒಂದಷ್ಟು ಹೆಚ್ಚು ಹೊತ್ತು ಅಲ್ಲೇ ಇದ್ದರೂ ಬೈಗುಳಗಳ ಸುರಿಮಳೆ ಶುರುವಾಗುತ್ತದೆ.

ಪಕ್ಕದ ಮನೆಯ ಯುವತಿಯೊಂದಿಗೆ ಗೆಳೆತನ ಕುದುರಿಸಲು ಪ್ರಯತ್ನಿಸಿ ಸೋತಿರುವ ನಮ್ಮಮ್ಮ ಇದೀಗ ಸ್ಕೂಲಿಗೆ ಹೋಗುವ ಅವರ ಪುತ್ರನೊಂದಿಗೆ

ಫ್ರೆಂಡ್ಶಿಪ್ಪು ಜಾರಿಯಲ್ಲಿಟ್ಟಿದ್ದಾರೆ. ಇದಕ್ಕೆ ಕಾರಣವಾಗಿರುವುದು ಮನೆ ಮುಂದೆ ಇರುವ ಸೀಬೆ ಗಿಡ.

ಸೀಬೆ ಗಿಡದಲ್ಲಿ ಈ ಬಾರಿ ಭರ್ಜರಿ ಫಸಲು. ಗಿಡದ ತುಂಬಾ ಬಿಟ್ಟಿರುವ ಹಣ್ಣುಗಳ ಮೇಲೆ ಅಳಿಲು, ಹಕ್ಕಿಗಳಿಂದಿಡಿದು ಮನೆಗೆ ಬಂದು ಹೋಗುವ ಎಲ್ಲರ ಕಣ್ಣೂ ಬೀಳುತ್ತಿದೆ. ಎಲ್ಲರೂ ಕೀಳುವ ಮತ್ತು ತಿನ್ನುವ ಸಾಮರ್ಥ್ಯಕ್ಕನುಗುಣವಾಗಿ ಹಣ್ಣಿನ ಕೊಯ್ಲು ನಡೆಸುತ್ತಾರೆ.



ಪಕ್ಕದ ಮನೆಯ ಪುಟ್ಟ ಹುಡುಗನಿಗೂ ಈ ಸೀಬೆ ಹಣ್ಣುಗಳ ಮೇಲೆ ಕಣ್ಣು ಬಿದ್ದಿರಬಹುದು, ಅವನೂ ನೋಡಿ ಆಸೆ ಪಡುತ್ತಿರಬಹುದೆಂಬುದು ನಮ್ಮಮ್ಮನ ಗ್ರಹಿಕೆಯಾಗಿತ್ತು. ಆ ಹುಡುಗನಿಗೆ ಹೇಗಾದರೂ ಮಾಡಿ ಸೀಬೆ ಹಣ್ಣು ಕೊಡಬೇಕು ಎಂದು ನಿರ್ಧರಿಸಿದ ಅಮ್ಮ, ಅವನು ಮನೆಯಿಂದ ಆಚೆ ಬರುವುದನ್ನೇ ಕಾಯ್ದು, ಕೊನೆಗೂ ಒಂದು ದಿನ, ‘ಹೋಯ್ ಪುಟ್ಟ ಬಾರೋ ಇಲ್ಲಿ, ಸೀಬೆ ಹಣ್ಣು ಕೊಡ್ತೀನಿ’

ಅಂತ ಕರೆದು ಕೊಟ್ಟು, ‘ಇನ್ಮೇಲೆ ದಿನಾ ನಿಮ್ಮನೆ ಕಾಂಪೌಂಡ್ ಮೇಲೆ ಇಡ್ತೀನಿ ತೆಗೆದುಕೋ’ ಅಂತೇಳಿದರು. ಈಗ ದಿನಾ ಹಾಗೆ ಮಾಡುತ್ತಾರೆ.

ಇದನ್ನೆಲ್ಲ ಗಮನಿಸಿದ ನಾನು, 'ಅಮ್ಮ ಪಕ್ಕದ್ಮನೆಯವ್ರಿಗೆ ಜಂಭ ಜಾಸ್ತಿ. ನೀವು ಮಾತಾಡ್ಸೋಕೆ ನೋಡಿದ್ರೂ ಮುಖ ತಿರುಗಿಸ್ಕೊಂಡು ಹೋಗ್ತಾರೆ. ಅವ್ರಿಗೆ ಏನು ಕಮ್ಮಿ ಆಗಿದೆ ಅಂತ ಅವ್ರ ಮಗನಿಗೆ ನೀವು ಸೀಬೆ ಹಣ್ಣು ಕಿತ್ತು ಕೊಡ್ತಿದ್ದೀರಿ' ಅಂತ ಪ್ರಶ್ನಿಸಿದೆ. 'ಅಲ್ಲ ಕಣೋ, ನೀವು ಚಿಕ್ಕವರಿದ್ದಾಗ ಹಳೆ ಮನೆ ಎದುರಿನ ಮನೆಯ ಕಾಂಪೌಂಡಿನಲ್ಲಿದ್ದ ಸೀಬೆ ಗಿಡದಲ್ಲಿ ಹಣ್ಣು ನೋಡಿ ಆಸೆ ಪಡ್ತಿರ್ಲಿಲ್ವ? ಪಾಪ ಈ ಹುಡುಗನೂ ಹಾಗೆ ಅಲ್ವಾ' ಅಂತ ಕೇಳಿದ್ರು.

ಅಮ್ಮ ಹೇಳಿದ್ದು ಹೆಚ್ಚು ಆಪ್ತವಾಗಿತ್ತು. ನಾವು ಚಿಕ್ಕವರಿದ್ದಾಗ ಎದುರು ಮನೆಯ ಕಾಂಪೌಂಡಿನಲ್ಲಿ ಸೀಬೆ, ದಾಳಿಂಬೆ ಮತ್ತು ನೇರಳೆ ಗಿಡಗಳಿದ್ದವು. ಆ ಮನೆಯವರು ತಾವೂ ಹಣ್ಣುಗಳನ್ನು ಕೊಯ್ದು ತಿನ್ನುತ್ತಿರಲಿಲ್ಲ. ನಮಗೂ ಕೊಯ್ದುಕೊಳ್ಳಲು ಅವಕಾಶ ನೀಡುತ್ತಿರಲಿಲ್ಲ. ಆ ಮನೆಯಲ್ಲಿ ಯಾರೂ ಇರದಿದ್ದ ಸಂದರ್ಭದಲ್ಲಿ ಕದ್ದು ತಿಂದು ಬಾಯಿ ಚಪಲ ತೀರಿಸಿಕೊಳ್ಳುತ್ತಿದ್ದೆವು. ಹೀಗೆ ಕದಿಯುವಾಗ ಸಿಕ್ಕಿ ಬೀಳುವವರಿಗೆ ಆ ಮನೆಯವರು ಹಿಗ್ಗಾಮುಗ್ಗಾ ಉಗಿಯುತ್ತಿದ್ದರು. ಅದನ್ನೆಲ್ಲ ಗಮನಿಸಿದ್ದ ಅಮ್ಮ, ನಮ್ಮ ಮನೆಯ ಸೀಬೆ ಗಿಡ ನೋಡಿ ಚಿಕ್ಕವರಿದ್ದಾಗ ನಾವು ನೊಂದುಕೊಂಡಂತೆ ಪಕ್ಕದ ಮನೆ ಹುಡುಗ ನೊಂದುಕೊಳ್ಳಬಾರದೆಂದು ಮುತುವರ್ಜಿ ವಹಿಸಿ ದಿನಾ ಬೆಳಿಗ್ಗೆ ತಮ್ಮ ಕೈಗೆ ಎಟುಕುವಷ್ಟು ಹಣ್ಣು ಕೊಯ್ದು ಪಕ್ಕದ ಮನೆ ಕಾಂಪೌಂಡಿನ ಮೇಲೆ ಇಡುತ್ತಾರೆ.

(ಸೆಪ್ಟೆಂಬರ್ 2015, ಸಖಿ)



# ಜೀವಿಸುವುದು ಮರೆತ ಹೊತ್ತಲ್ಲಿ...

'ಜನರೇಷನ್ ಗ್ಯಾಪ್ ಅಂದ್ರೆ ಈಗ ಎಷ್ಟು ವರ್ಷ ಇರ್ಬಹುದು ಹೇಳಿ ನೋಡೋಣ' ಅಂತ ನಿವೃತ್ತಿ ಅಂಚಿನಲ್ಲಿರುವ ನಮ್ಮ ಸರ್ ಕೇಳಿದ್ರು.
ಅವರ ಈ ಪ್ರಶ್ನೆಗೆ ಉತ್ತರಗಳು ನಮ್ಮೊಳಗೆ ಕ್ಯಾಟ್ವಾಕ್ ಮಾಡುವ ಹೊತ್ತಿಗೆ ತಮ್ಮ ಪ್ರಶ್ನೆಗೆ ತಾವೇ ಉತ್ತರಿಸಲಾರಂಭಿಸಿದರು. 'ನಾವು ಚಿಕ್ಕವರಿದ್ದಾಗ ಜನರೇಷನ್ ಗ್ಯಾಪ್ ಅಂದ್ರೆ ಮೂವತ್ತು ವರ್ಷ. ಆಮೇಲಾಮೇಲೆ ಅದು ಇಪ್ಪತ್ತು ವರ್ಷಕ್ಕೆ ಇಳಿದಿತ್ತು. ಈಗ ಜನರೇಷನ್ ಗ್ಯಾಪ್ ಅಂದ್ರೆ ಬರೀ ಒಂದು ವರ್ಷ!' ಅಂತಂದು ವ್ಯಂಗ್ಯದ ನಗು ಬೀರಿದರು.
'ಸರ್ ಹೇಳಿದ್ದು ಸರಿನಾ' ಅನ್ನುವ ಅನುಮಾನ ಒಳಗೊಳಗೆ ಅಡ್ಡಾಡಲಾರಂಭಿಸಿತು. ಅವರು ಯಾಕೆ ಹೀಗೇಳ್ತಿದ್ದಾರೆ? ತಮ್ಮ ಇದುವರೆಗಿನ ಬದುಕಿನ ಅನುಭವಗಳಿಂದ ಗ್ರಹಿಸಿದ್ದನ್ನಷ್ಟೆ ಹೇಳುವ ಅವರು ಸುಖಾಸುಮ್ಮನೆ ಬೀಸು ಹೇಳಿಕೆಗಳನ್ನು ನೀಡುವವರಲ್ಲ. ಹಾಗಿದ್ದರೆ ಜನರೇಷನ್ ಗ್ಯಾಪ್ ಎಂಬುದು ಕೇವಲ ಒಂದು ವರ್ಷಕ್ಕೆ ಇಳಿದದ್ದು ಏಕೆ ಎಂಬ ಪ್ರಶ್ನೆಯನ್ನು ನನ್ನೊಳಗೇ ಕೇಳಿಕೊಳ್ಳುವ ವೇಳೆಗೆ ಕೆಲ ದಿನಗಳ ಹಿಂದಷ್ಟೇ ಪದವಿ ಅಂತಿಮ ವರ್ಷದ ವಿದ್ಯಾರ್ಥಿಯೊಬ್ಬ ಹಂಚಿಕೊಂಡಿದ್ದ ಅನಿಸಿಕೆ ಮನಸ್ಸಿಗೆ ತಾಕಲಾರಂಭಿಸಿತು.

'ಕಾಲೇಜ್ ಡೇ' ಸಂಘಟಿಸುವ ಹುಡುಗರ ಗುಂಪಿಗೆ ಕ್ಲಬ್ ಎನ್ನುವುದು ನಮ್ಮಲ್ಲಿನ ವಾಡಿಕೆ. ಅಂತಹದೊಂದು ಕ್ಲಬ್ನ ಮೆಂಬರ್ ಆಗಿದ್ದ ಅವನು, ತಾನು ಕಾಲೇಜ್ ಡೇ ಕಾರ್ಯಕ್ರಮಕ್ಕೆ ಪೂರ್ವ ತಯಾರಿ ನಡೆಸಬೇಕಿರುವ ಕ್ಲಬ್ನ ಸೀನಿಯರ್ ಮೆಂಬರ್ ಆಗಿರುವುದರಿಂದ ಒಂದೆರಡು ದಿನ ಕ್ಲಾಸ್ ಅಟೆಂಡ್ ಮಾಡಲು ಸಾಧ್ಯವಿಲ್ಲ.



ಚಿತ್ರ ಕೃಪೆ: ಉದಯವಾಣಿ

ಅಟೆಂಡೆನ್ಸ್ ಕೊಡಿ ಸರ್ ಎನ್ನುವ ಮನವಿ ಸಲ್ಲಿಸಲು ನನ್ನ ಬಳಿ ಬಂದಿದ್ದ. ಅದರೊಂದಿಗೆ ಸೀನಿಯರ್ಸ್ ಆದ ನಾವೇ ಎಲ್ಲ ಕೆಲ್ಸನೂ ಮುಂದೆ ನಿಂತು ಮಾಡಿಸ್ಬೇಕು ಅಂತಲೂ ಸೇರಿಸಿದ್ದ.

'ನಿಮ್ ಕ್ಲಬ್ನಲ್ಲಿ ಜೂನಿಯರ್ಸ್ಗೆ ಸಿಕ್ಕಾಪಟ್ಟೆ ರ್‍ಯಾಗ್ ಮಾಡ್ತೀರಂತೆ... ನಿಮ್ ಅಸೈನ್ಮೆಂಟ್ಸ್ನೆಲ್ಲ ಅವ್ರ ಹತ್ರನೇ ಬರುಸ್ತೀರಂತೆ ನಿಜನಾ?' ಅಂತ ಪ್ರಶ್ನಿಸಿದೆ. ಈ ಕುರಿತು ಅವರಿವರು ಹೊರಗೆಡವಿದ್ದು ಅಲ್ಲಲ್ಲಿ ಕಿವಿಗೆ ಬಿದ್ದಿತ್ತು.

'ಸಾರ್... ಈಗಿನ್ ಜೂನಿಯರ್ಸ್ ಆಟಿಟ್ಯೂಡ್ ಹೇಗಿದೆ ಅನ್ನೋದ್ನ ನೀವೂ ನೋಡಿರ್ತೀರಾ ಅಲ್ವಾ? ನಾವೇನೊ ನಮ್ ಸೀನಿಯರ್ಸ್ ಹತ್ರ ರ್‍ಯಾಗ್ ಮಾಡುಸ್ಕೊಂಡ್ವಿ. ಆದ್ರೆ ಈಗಿನ್ ಜೂನಿಯರ್ಸ್ಗೆ ರ್‍ಯಾಗ್ ಮಾಡೋದಿರ್ಲಿ, ಕ್ಲಬ್

ಮೆಂಬರ್ಸ್ ಆಗಿ ಅವ್ರು ಮಾಡ್ಬೇಕಿರೋ ಕೆಲ್ಸನಾ ಮಾಡ್ಸೋದೆ ಕಷ್ಟ ಆಗಿದೆ. ನಮ್ ಜೂನಿಯರ್ಸು ನಮ್ ಥರ ಅಲ್ಲ ಬಿಡಿ ಸರ್' ಅಂತಂದ.

ಇಲ್ಲಿ ನನ್ನ ಗಮನ ಸೆಳೆದ ಅಂಶ, ಸೀನಿಯರ್ಸ್ ಮತ್ತು ಜೂನಿಯರ್ಸ್ ನಡುವೆ ಇರುವುದು ಕೇವಲ ಒಂದರಿಂದ ಮೂರು ವರ್ಷಗಳ ಅಂತರವಷ್ಟೆ. ಇದು ನಮ್ಮ ಸರ್ ಹೇಳಿದ ಮಾತಿಗೆ ಪೂರಕ ನಿದರ್ಶನವಾಗಿ ಗೋಚರಿಸಲಾರಂಭಿಸಿದೆ.

---

ನಾಲ್ಕು ವರ್ಷಗಳ ಹಿಂದಷ್ಟೆ ತಂದಿದ್ದ ಎಲ್ಸಿಡಿ ಟಿವಿ ಕೆಲ ದಿನಗಳಿಂದ ಕೇವಲ ದೃಶ್ಯಗಳನ್ನಷ್ಟೇ ಬಿತ್ತರಿಸಲಾರಂಭಿಸಿದೆ. ಧ್ವನಿಯನ್ನು ನಾವೇ ಊಹಿಸಿಕೊಂಡು ಟಿವಿ ನೋಡಬೇಕಿದೆ. ರಿಪೇರಿಗೆಂದು ಕೊಂಡೊಯ್ದರೆ, ಟಿವಿ ರಿಪೇರಿಯವರು 'ಈಗ ಎಲ್ಸಿಡಿ ಟಿವಿನಾ ಯಾರು ಯೂಸ್ ಮಾಡ್ತಾರೆ ಹೇಳಿ ಸರ್? ರಿಪೇರಿ ಮಾಡ್ಕೊಡೋಣ ಅಂದ್ರೆ ಅದ್ರು ಸ್ಪೇರ್ಸ್ ಸಿಗಲ್ಲ. ಈಗೇನಿದ್ರೂ ಎಲ್ಇಡಿ ಜಮಾನ. ಸುಮ್ನೆ ಅದನ್ನ ಬಿಸಾಕಿ ಹೊಸ ಎಲ್ಇಡಿ ಟಿವಿ ತಗೊಳ್ಳೋದು ಒಳ್ಳೇದು' ಅಂದ.

ಅಯ್ಯೋ ಕಾಲವೇ... ಬರೀ ಮೂರ್ನಾಲ್ಕು ವರ್ಷಗಳಿಗೇನೆ ಎಲ್ಇಡಿ ಟಿವಿ ಔಟ್ಡೇಟೆಡ್ ಆಗೋಯ್ತಾ ಅಂತ ಮನಸ್ಸಿನಲ್ಲೇ ಗೊಣಗಿಕೊಂಡೆ. ವೈಟ್ ಅಂಡ್ ಬ್ಲ್ಯಾಕ್ ಟಿವಿಯ ಸ್ಥಾನ ತುಂಬಲು ಕಲರ್ ಟಿವಿಗಳು ತೆಗೆದುಕೊಂಡ ಕಾಲಾವಧಿ ಎಷ್ಟು? ಅದಾದ ನಂತರ ಗುಡಾಣದಂತಹ ಟಿವಿ ಸೆಟ್ಗಳನ್ನು ಜೀರೊ ಫಿಗರ್ನಂತಹ ಎಲ್ಸಿಡಿ ಟಿವಿ ಹಿನ್ನೆಲೆಗೆ ತಳ್ಳಲು ಎಷ್ಟು ವರ್ಷಗಳು ಬೇಕಾಯಿತು ಅಂತೆಲ್ಲ ಪ್ರಶ್ನಿಸಿಕೊಂಡು ಉತ್ತರ ಕಂಡುಕೊಳ್ಳಲಾರಂಭಿಸಿದೆ.

ನಮ್ಮ ಸರ್ ಮಂಡಿಸಿದ ಜನರೇಷನ್ ಗ್ಯಾಪ್ ಥಿಯರಿ ಸಮರ್ಥಿಸುವಂತಹ ಅಂಶಗಳು ಇಲ್ಲೂ ಸಿಕ್ಕವು.

---

ವಾಟ್ಸ್‌ಆಪ್ ಮೇಲೆ ಸ್ನೇಹಿತರಿಗೆಲ್ಲ ಲವ್ ಅಟ್ ಫಸ್ಟ್ ಸೈಟ್ ಆಗುತ್ತಿದ್ದ ಹೊತ್ತಲ್ಲೂ ನಾನಿನ್ನೂ ಆಂಡ್ರಾಯ್ಡ್ ಮೊಬೈಲ್ ತೆಗೆದುಕೊಳ್ಳದೆ ಅವರ ವಾಟ್ಸ್‌ಆಪ್ ಗುಂಪುಗಳಿಂದ ಹೊರಗುಳಿದಿದ್ದಕ್ಕೆ ತೀವ್ರ ಆಕ್ಷೇಪಗಳು ವ್ಯಕ್ತವಾಗಲಾರಂಭಿಸಿದ್ದವು. ಎಷ್ಟೋ ವರ್ಷಗಳ ನಂತರ ಸಿಗುತ್ತಿದ್ದ ಪ್ರೈಮರಿ ಸ್ಕೂಲಿನ ಚೆಡ್ಡಿ ದೋಸ್ತ್‌ಗಳು ಕೂಡ ನೀನು 'ನಮ್ ಸ್ಕೂಲ್ಮೇಟ್ಸ್ ಗ್ರೂಪ್ನಲ್ಲಿಲ್ವ? ನಂಬರ್ ಕೊಡು ಆಡ್ ಮಾಡ್ತೀವಿ' ಅಂತೆಲ್ಲ ಕೇಳಲಾರಂಭಿಸಿದ್ದರು. ನಾನಿನ್ನೂ ವಾಟ್ಸ್‌ಆಪ್ ಬಳಸುತ್ತಿಲ್ಲವೆಂಬ ಸಂಗತಿ ಅವರನ್ನು ಇನ್ನಿಲ್ಲದ ಅಚ್ಚರಿಗೆ ದೂಡುತ್ತಿದ್ದನ್ನು ಗಮನಿಸಿ, 'ಇದೇನಪ್ಪ ವಾಟ್ಸ್‌ಆಪ್ ಮಹಿಮೆ' ಅಂತಂದುಕೊಂಡು ಚಕಿತನಾಗಿದ್ದೆ. ಆದರೆ, ಕೇವಲ ಎರಡು ವರ್ಷಗಳ ಹಿಂದಷ್ಟೇ ಖರೀದಿಸಿದ್ದ ಟಚ್ ಸ್ಕ್ರೀನ್ ಮೊಬೈಲ್ ಹ್ಯಾಂಡ್ಸೆಟ್ಟು ಈ ವಾಟ್ಸ್‌ಆಪಿನ ಕಾರಣಕ್ಕೆ ಕೆಲಸಕ್ಕೆ ಬಾರದ ಗುಜರಿ ಸಾಮಾನಾಗಿ ಮಾರ್ಪಡುತ್ತದೆಂದು ಊಹಿಸಿರಲೇ ಇಲ್ಲ.

ಸ್ನೇಹಿತರ ನಿರಂತರ ಹೀಗಳೆಯುವಿಕೆಯಿಂದಾಗಿ ಕೊನೆಗೂ ಆಂಡ್ರಾಯ್ಡ್ ಮೊಬೈಲ್ ತೆಗೆದುಕೊಂಡು ವಾಟ್ಸ್‌ಆಪ್ ಇನ್ಸ್ಟಾಲ್ ಮಾಡಿಕೊಂಡು ಅವರೆಲ್ಲರೂ ಅದಾಗಲೇ ಸೃಷ್ಟಿಸಿಕೊಂಡಿದ್ದ ಗುಂಪುಗಳಿಗೆ ಹೊಸ ಅತಿಥಿಯಾಗಿ ಸೇರ್ಪಡೆಗೊಂಡದ್ದಾಯ್ತು. ಹೇಗೊ ನಾನೂ ಅಪ್ಡೇಟ್ ಆಗಿಬಿಟ್ಟೆ ಅಂತ ನಿಟ್ಟುಸಿರು ಬಿಡುತ್ತಿರುವಾಗಲೇ '3ಜಿ 4ಜಿ' ಗುಮ್ಮ ಬಂದು ಕಾಡಲಾರಂಭಿಸಿದೆ. ಯಾರ್ಯಾರೋ ಗುರುತು ಪರಿಚಯವಿಲ್ಲದವರೆಲ್ಲ ತಾವೊಂದು ವಾಟ್ಸ್‌ಆಪ್

ಗುಂಪು ಸೃಷ್ಟಿಸಿ, ನನ್ನನ್ನೂ ಅದರೊಳಗೆ ತುಂಬುತ್ತ ಹೋಗಲಾರಂಭಿಸಿರುವುದರಿಂದ ನನ್ನ ಮೊಬೈಲ್ಗೆ ವಾಟ್ಸ್‌ಆಪ್ ಹೊರಲಾಗದ ಭಾರವಾಗಿ ಕಾಡಲಾರಂಭಿಸಿದೆ. ಆರು ತಿಂಗಳಿಗೊಂದು ಹ್ಯಾಂಡ್ಸೆಟ್ಟು ಬದಲಿಸುವ ಸ್ನೇಹಿತರೆಲ್ಲ 3ಜಿಯಿಂದ 4ಜಿಗೆ ಜಿಗಿಯುವ ಉಮೇದು ತೋರುತ್ತಿದ್ದರೆ, ನಾನಿನ್ನೂ 2ಜಿ ಬಲೆಯಲ್ಲೇ ಸಿಲುಕಿ ನರಳುತ್ತಿದ್ದೇನೆ. ಮಾತಿಗೆ ಸಿಗುವ ಸ್ನೇಹಿತರೆಲ್ಲ 'ನೀನಿನ್ನೂ 2ಜಿನಾ!' ಅಂತ ಅಚ್ಚರಿ ವ್ಯಕ್ತಪಡಿಸುತ್ತಾರೆ. ವಾಟ್ಸ್‌ಆಪ್ ಕಾರಣಕ್ಕಾಗಿ ತಾನು ಮಾಡಬಹುದಾದ ಎಲ್ಲ ಕೆಲಸವನ್ನೂ ನೆಟ್ಟಗೆ ಮಾಡುತ್ತಿದ್ದ ಹ್ಯಾಂಡ್ಸೆಟ್ ಒಂದನ್ನು ಈಗಾಗಲೇ ಮೂಲೆಗೆಸೆದಿದ್ದ ನಾನು, ಇದೀಗ ಈ 'ಜಿ'ಗಳ ದೆಸೆಯಿಂದ ಮತ್ತೊಂದು ಮೊಬೈಲನ್ನು ಅದಿನ್ನೂ ಮಧ್ಯವಯಸ್ಸಿನಲ್ಲಿರುವಾಗಲೇ ಅಸುನೀಗಿಸಬೇಕಾದ ಸಂಕಷ್ಟ ಎದುರಿಸುತ್ತಿದ್ದೇನೆ.

ಈಗ ಮತ್ತೆ ನಮ್ಮ ಸರ್ ಮುಂದಿಟ್ಟ ಥಿಯರಿ ಕಣ್ಣೆದುರು ಬಂದು ಕುಣಿಯಲಾರಂಭಿಸಿದೆ.

---

ಎಲ್ಲವೂ ಕ್ಷಿಪ್ರಗತಿಯಲ್ಲಿ ಬದಲಾಗುತ್ತಿರುವ ಹೊತ್ತಲ್ಲಿ ಪಡೆದುಕೊಳ್ಳುವ ಉಮೇದು ಒಳಸೇರಿ ಕಳೆದುಕೊಳ್ಳುತ್ತಿರುವುದು ಏನೂ ಇಲ್ಲವೇ? ಅತಿ ವೇಗ ನಮ್ಮೊಳಗಿನ ಆವೇಗ ಹೆಚ್ಚಿಸಿದಂತೆಲ್ಲ ನೆಮ್ಮದಿ ನಮ್ಮಿಂದ ಮಾರು ದೂರ ಸರಿಯುತ್ತ ಹೋಗುವುದಿಲ್ಲವೇ? ಜನರೇಷನ್ ಗ್ಯಾಪು ಮೂವತ್ತರಿಂದ ಮೂರು ವರ್ಷಕ್ಕೆ, ವರ್ಷದಿಂದ ತಿಂಗಳಿಗೆ ಇಳಿಯುತ್ತ ಹೋದಂತೆಲ್ಲ ಮನಸ್ಸುಗಳ ನಡುವಿನ ಅಂತರ ಕೂಡ ಹಿರಿದಾಗದಿರುವುದೇ?

ನಿಂತು ಸುಧಾರಿಸಿಕೊಳ್ಳುವ ಸಂಯಮವೇ ಔಟ್ಡೇಟೆಡ್ ಆಗುವ ಹೀಗಳಿಕೆಯ ಪರಿಧಿಯೊಳಗೆ ಬಂಧಿಯಾಗಿರುವಾಗ ಓಡುವುದೊಂದೇ ಇರುವ ದಾರಿ ಎಂಬ ಗ್ರಹಿಕೆ ರೂಪದ ಭ್ರಮೆಗೆ ಜೋತು ಬೀಳುವುದೇ? ಅಪ್ಡೇಟೆಡ್ ಜಗತ್ತು ನೇಯುವ ಬಲೆಯಿಂದ ಬಿಡಿಸಿಕೊಂಡು ಯೋಚಿಸಬೇಕಲ್ಲವೇ?

(ಜೂನ್ 2016, ಉದಯವಾಣಿ)



# ಇಲ್ಲಿರಲಾರೆ... ಅಲ್ಲಿಗೆ ಹೋಗಲಾರೆ...

ಕೆಲಸ ಅರಸಿ ಯುವ ಸಮುದಾಯ ನಗರದೆಡೆಗೆ ದೌಡಾಯಿಸುತ್ತಿದೆ. ಹೊಟ್ಟೆ ಪಾಡಿನೆದುರು ನೆಮ್ಮದಿ-ನಿಟ್ಟುಸಿರಿಗೆ ಎಳ್ಳು ನೀರು ಬಿಡುವುದಾದರೂ ಸರಿ, ನಗರದಲ್ಲೇ ಬದುಕು ಕಟ್ಟಿಕೊಳ್ಳಬೇಕೆಂಬ ತುಡಿತ ಹೆಚ್ಚುತ್ತಿದೆ. ಕೆಲವರಂತೂ ತಮಗಾಗಿ ಅಲ್ಲದಿದ್ದರೂ ತಮ್ಮ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ಕೊಡಿಸಲೆಂದು ನಗರದಲ್ಲಿ ನೆಲೆ ನಿಲ್ಲುತ್ತಿದ್ದಾರೆ.

ಮಹತ್ವಾಕಾಂಕ್ಷೆಯ ಬೆನ್ನು ಹತ್ತಿದವರು, ನಗರ ಬದುಕಿನ ಥಳುಕು ಬಳುಕಿಗೆ ಆಕರ್ಷಿತರಾದವರು ಹತ್ತಾರು ಹಲ್ಲಂಡೆಗಳ ನಡುವೆಯೂ ನಗರ ತಮ್ಮೆದುರು ತೆರೆದಿಡುವ ಬದುಕಿಗೆ ಹೊಂದಿಕೊಂಡು ಹೋಗುತ್ತಾರೆ. ಆದರೆ ತಮ್ಮ ಮಕ್ಕಳ ಆಶ್ರಯದಲ್ಲಿ ಬದುಕು ಸವೆಸುವ ಸ್ಥಿತಿಯಲ್ಲಿರುವ ಹಿರಿಯ ಜೀವಗಳು ಇತ್ತ ನಗರ ಜೀವನಕ್ಕೆ ಒಗ್ಗಿಕೊಳ್ಳಲಾಗದೆ, ಅತ್ತ ಮರಳಿ ಹಳ್ಳಿಗೆ ಹೋಗಲೂ ಸಾಧ್ಯವಾಗದೆ ಪರಿತಪಿಸುತ್ತಿದ್ದಾರೆ. ಅಂತಹವರ ಸಂಕಷ್ಟದ ಅರಿವಾದದ್ದು ಎದುರು ಮನೆ ತಾತ ಮೊನ್ನೆ ನಮ್ಮ ಮನೆಗೆ ಬಂದು ತಮ್ಮ ಅಳಲು ತೋಡಿಕೊಂಡಾಗಲೇ.

'ಏನೇ ಹೇಳಿ, ನಮ್ಗೆ ಈ ಸಿಟಿಲಿರೋಕಾಗಲ್ಲ. ಈ ರೋಡಲ್ಲಿ ಓಡಾಡಿದ್ರೆ ನಮ್ ಹೊಲ-ಗದ್ದೇಲಿ ತಿರುಗಾಡ್ದಂಗೆ ಅನ್ಸೋದೆ ಇಲ್ಲ. ದನ-ಕರ ಹೊಡ್ಕಂದು, ಹೊಲ ಗದ್ದೆ ಸುತ್ಕೊಂಡು ಇರ್ಬೇಕಾಗಿದ್ ನಮ್ಗೆ ಈ ಸಿಟಿಲೀ ಕೂಡಾಕ್ದಂಗಾಗಿದೆ' ಅಂತ ಅವರಂದ್ರು.

ತಮ್ಮ ಮೊಮ್ಮಕ್ಕಳನ್ನು ಶಾಲೆಗೆ ಕರೆದುಕೊಂಡು ಹೋಗಿ ಮತ್ತೆ ವಾಪಸ್ ಕರೆದುಕೊಂಡು ಬರುವ ಅವರು, ಮೊಮ್ಮಕ್ಕಳು ಮನೆಯಲ್ಲಿ ಇದ್ದಷ್ಟೂ ಹೊತ್ತು ಅವರೊಂದಿಗೆ ಅದು-ಇದು ಮಾತಾಡುತ್ತ ಕಾಲ ಕಳೆಯುತ್ತಾರೆ. ಮೊಮ್ಮಕ್ಕಳು

ಸ್ಕೂಲಿಗೆ ಹೋದಾಗ ಮನೆಯಲ್ಲಿ ಇವರಿಗೆ ಏನು ಮಾಡುವುದೆಂದೇ ತೋಚುವುದಿಲ್ಲ.

ಇದು ಇವರೊಬ್ಬರ ಸಮಸ್ಯೆ ಅಲ್ಲ. ಇದ್ದಷ್ಟೂ ದಿನ ತಮ್ಮವರೊಂದಿಗೆ ಬದುಕುವ ಆಶಯದೊಂದಿಗೆ ತಮ್ಮ ಬದುಕಿನ ಬಹುಭಾಗ ಜೀವಿಸಿದ ಪರಿಸರ ತೊರೆದು, ತಮಗೆ ಅಪರಿಚಿತವಾದ ಊರಲ್ಲಿ ಅನಿವಾರ್ಯವಾಗಿ ಇರಬೇಕಾದ ಸಂದಿಗ್ಧ ದಲ್ಲಿರುವವರೆಲ್ಲರಲ್ಲೂ ಇದೇ ರೀತಿಯ ತಳಮಳಗಳು ಮನೆ ಮಾಡಿವೆ.

ಕನಸುಗಳ ಬೆನ್ನೇರಿ ಹೊರಟಿರುವ ಮಕ್ಕಳಿಗೆ ಏನನ್ನೂ ಹೇಳಲಾಗದೆ, ಅವರನ್ನು ಬಿಟ್ಟಿರಲೂ ಆಗದೆ ನಗರ ಬದುಕಿನ ಪರಿಸರದಲ್ಲೇ ಸಿಗಬಹುದಾದ ನೆಮ್ಮದಿಯ ನೆಲೆಗಳನ್ನು ಹಿರಿಯರು ಅರಸುತ್ತಿದ್ದಾರೆ.

(ಜನವರಿ 2014, ವಿಜಯವಾಣಿ)



# ಮೊಬೈಲು ನಮ್ಮೊಳಗಿನ ಮಾತು ಕಸಿದುಕೊಳ್ಳುತ್ತಿದೆಯೇ?

ಮೊನ್ನೆ ಬಸ್ನಲ್ಲಿ ಪ್ರಯಾಣಿಸುತ್ತಿದ್ದೆ. ನನ್ನನ್ನೂ ಒಳಗೊಂಡಂತೆ ಬಹುತೇಕ ಎಲ್ಲರೂ ಸಮಯ ನೂಕಲು ತಮ್ಮ ಮೊಬೈಲು ಅಥವಾ ನಿದ್ರೆಯ ಮೊರೆ ಹೋಗಿದ್ದರು. ಎಲ್ಲೋ ಕೆಲವರು ಮಾತ್ರ ಪರಸ್ಪರ ಮಾತುಕತೆಯಲ್ಲಿ ತೊಡಗಿಕೊಂಡಿದ್ದರು. ಪ್ರಯಾಣದೊಂದಿಗೆ ಹುಟ್ಟಿಕೊಳ್ಳುತ್ತಿದ್ದ ಹೊಸ ಒಡನಾಟಗಳಿಗೆಲ್ಲ ಮೊಬೈಲು ಎಳ್ಳು ನೀರು ಬಿಡುತ್ತಿದೆಯೇ ಎಂಬ ಪ್ರಶ್ನೆಯೊಂದಿಗೆ ಮನಸ್ಸು ಗುದ್ದಾಡುವ ಹೊತ್ತಿಗೆ ಸರಿಯಾಗಿ ಹಿಂದಿನ ಸೀಟಿನಲ್ಲಿ ಕುಳಿತಿದ್ದ ಅಪ್ಪ-ಮಗನ ನಡುವಿನ ಮಾತುಕತೆ ಕಿವಿಗೆ ಬೀಳಲಾರಂಭಿಸಿತು. ಐದಾರು ವರ್ಷದ ಪುಟ್ಟ ಹುಡುಗ, 'ಪಪ್ಪಾ ಒನ್ಗೆ ಅರ್ಜೆಂಟ್ ಆಗ್ತಿದೆ' ಅಂತ ತನ್ನ ಅಳಲು ತೋಡಿಕೊಳ್ಳಲಾರಂಭಿಸಿದ್ದ. 'ಇನ್ನೇನು ಥರ್ಟಿ ಮಿನಿಟ್ಸ್ ಅಷ್ಟೇ ಪುಟ್ಟ' ಎಂಬ ಅಪ್ಪನ ಮಾತಿಗೆ ಒಂದೆರಡು ನಿಮಿಷವಷ್ಟೆ ಸುಮ್ಮನಿದ್ದು ಮತ್ತೆ 'ಪಪ್ಪಾ ತಡ್ಯೋಕೆ ಆಗ್ತಿಲ್ಲ' ಅಂತ ಹೇಳುವ ದನಿಯಲ್ಲೇ ಅಳುವ ಸೂಚನೆ ನೀಡಿದ. 'ಇರು ಪುಟ್ಟ, ಡ್ರೈವರ್-ಕಂಡಕ್ಟರ್ ಅಂಕಲ್ಗಳ್ಗೆ ಬಸ್ ನಿಲ್ಸೋಕೆ ರಿಕ್ವೆಸ್ಟ್ ಮಾಡ್ಕೊತೀನಿ' ಅಂತೇಳಿ ಡ್ರೈವರ್ ಬಳಿ ಹೋದ್ರು. ಮೊದಲೇ ಟ್ರಾಫಿಕ್ಕು, ಟೋಲ್ ಗೇಟುಗಳ ಎದುರು ಕಂಡ ವಾಹನಗಳ ಉದ್ದನೆ ಸಾಲುಗಳಿಂದ ರೋಸಿ ಹೋಗಿದ್ದ ಡ್ರೈವರ್, 'ಇದುನ್ನೇನು ನಿಮ್ಮನೆ ಅಂದ್ಕೊಂಡಿದ್ದೀರೇನ್ರಿ? ಹಿಂದಿನ ಸ್ಟಾಪ್ನಲ್ಲಷ್ಟೆ ಹತ್ತಿದ್ದೀರಿ. ಅಷ್ಟೂ ಗೊತ್ತಾಗಲ್ವ' ಅಂತ ಮಂಗಳಾರತಿ ಎತ್ತಿದ ಮೇಲೆ, 'ಮುಂದೆ ಇಳುಸ್ತೀನಿ. ಡೋರ್ ಹತ್ರ ಹೋಗಿ' ಅಂತ ಸೂಚಿಸಿದರು. ಡ್ರೈವರ್ ಸಿಟ್ಟು ತಣಿಸಲು ಮುಂದಾದ ಕಂಡಕ್ಟರ್, 'ಪಾಪ ಪುಟ್ಟ ಮಕ್ಕಳ್ವ ಹೋಗ್ಲಿ ಬಿಡಿ. ಅವು ಹೇಳೋದ್ ಸರ್ಯಾಗಿ ಹೇಳ್ಬೇಕಲ್ಲ' ಅಂತಂದ್ರು.

ತನ್ನ ನಂಬರ್ ಒನ್ ಪ್ರಾಬ್ಲಮ್ ರಸ್ತೆ ಬದಿಯಲ್ಲಿ ಪರಿಹರಿಸಿಕೊಂಡು ಬಂದ ಪುಟ್ಟ ಹುಡುಗ, 'ಪಪ್ಪಾ ಈಗ ಫುಲ್ ಫ್ರೀಯಾಯ್ತು' ಅಂತಂದು ನಗು ಬೀರಿದ. ಮಗನ ದೆಸೆಯಿಂದ ಪೀಕಲಾಟ ಅನುಭವಿಸಿದ ತಂದೆ, 'ಪುಟ್ಟ ನೋಡು ಇನ್ಮೇಲೆ ಈ ಥರ ಮಾಡ್ಬಾರ್ದು. ನಿಂಗೆ ಟಾಯ್ಲೆಟ್ ಮಾಡ್ಬೇಕು ಅನ್ಸಿದ್ರೆ ಅದ್ನ ಬಸ್ ಹತ್ತುವುದಕ್ಕಿಂತ ಮೊದ್ಲೇ ಹೇಳ್ಬೇಕು ಆಯ್ತಾ' ಅಂತ ತಿಳುವಳಿಕೆ ನೀಡಿದರು. 'ಓಕೆ ಪಪ್ಪಾ, ಆದ್ರೆ ಅರ್ಜೆಂಟ್ ಆದ್ಮೇಲೆ ಅಲ್ವಾ ನಮ್ಗೆ ಗೊತ್ತಾಗೋದು? ಮೊದ್ಲೆ ಹೇಳೋದು ಹೇಗೆ?' ಎಂದು ಗೊಣಗಿಕೊಳ್ಳುತ್ತಲೇ ಆ ವಿಷಯಕ್ಕೆ ಪೂರ್ಣವಿರಾಮವಿಟ್ಟು ತನ್ನೊಳಗೆ ಆಯಾ ಕ್ಷಣಕ್ಕೆ ಮೂಡುವ ಪ್ರಶ್ನೆಗಳಿಗೆಲ್ಲ ತನ್ನ ಅಪ್ಪನಿಂದ ಉತ್ತರ ಪಡೆದುಕೊಳ್ಳಲಾರಂಭಿಸಿದ. ಬಸ್ಸು ಸಾಗುವ ರಸ್ತೆ ಬದಿಯಲ್ಲಿದ್ದ 'ಪವರ್ ಗ್ರಿಡ್' ನೋಡಿ 'ಪಪ್ಪಾ ಇದೇನು?' ಅಂದ. 'ನಮ್ಮನೆ ಲೈಟ್ ಹತ್ತೋಕೆ ಕರೆಂಟ್ ಬೇಕಲ್ಲ ಅದು ಇಲ್ಲಿಂದಲೇ ಸಪ್ಲೈ ಆಗೋದು ಪುಟ್ಟ' ಎಂದು ಅವರಪ್ಪ ಉತ್ತರಿಸುವ ಪ್ರಯತ್ನ ಮಾಡಿದ್ರು. 'ಹಾಗಾದ್ರೆ ಇಲ್ಲಿಂದ ಕರೆಂಟ್ನ ಡಬ್ಬಿಗೆ ತುಂಬಿ ಮನೆಗೆ ಕಳುಹಿಸ್ತಾರ ಪಪ್ಪಾ?' ಎಂಬ ಪ್ರಶ್ನೆ ಒಡ್ಡಿದ. 'ಡಬ್ಬಿಗೆ ಕರೆಂಟ್ ತುಂಬೋಕೆ ಆಗಲ್ಲ ಪುಟ್ಟ. ಅಲ್ಲಿ ಲೈಟ್ ಕಂಬ ಕಾಣ್ತಿದವಲ್ಲ ಅದರಲ್ಲಿ ವೈರ್ಗಳಿದವಲ್ಲ ಅದ್ರು ಮೂಲಕ ಇಲ್ಲಿಂದ ಮನೆಗೆ ಕರೆಂಟ್ ಬರುತ್ತೆ ಗೊತ್ತಾಯ್ತ' ಎಂಬ ಅಪ್ಪನ ಉತ್ತರಕ್ಕೆ ಸಮಾಧಾನ ಗೊಂಡಿರುವುದನ್ನು ಖಾತ್ರಿ ಪಡಿಸಲು 'ಓಕೆ ಪಪ್ಪಾ' ಅಂತಂದು ತಲೆಯಾಡಿಸಿದ. ಇದೇ ಧಾಟಿಯ ಒಂದಷ್ಟು ಮುಗ್ಧ ಪ್ರಶ್ನೆಗಳನ್ನು ಕೇಳಿ ತನ್ನ ತಂದೆಯಿಂದ ಉತ್ತರ ಪಡೆದುಕೊಂಡ ನಂತರ ಆ ಹುಡುಗ ಕೇಳಿದ ಪ್ರಶ್ನೆಯೊಂದು ನನ್ನ ಕಿವಿ ನಿಮಿರುವಂತೆ ಮಾಡಿತು.

'ಪಪ್ಪಾ ಮನಸ್ಸಲ್ಲೇ ಮಾತಾಡ್ಕೊಬಹುದಾ?'

'ಹೌದು ಪುಟ್ಟ?'

'ಏನ್ ಬೇಕಾದ್ರು ಮಾತಾಡ್ಕೊಬಹುದಾ?'

'ಹೌದು, ಏನ್ ಬೇಕಾದ್ರು ಮಾತಾಡ್ಕೊಬಹುದು'

'ಮನಸ್ಸಲ್ಲಿ ಮಾತಾಡೋದು ಹೇಗೆ ಅಂತ ಹೇಳು ಪಪ್ಪಾ'

'ಈಗ ನೀನು ಮನೆಗೆ ಹೋದ್ಮೇಲೆ ಹೋಂ ವರ್ಕ್ ಮಾಡ್ಬೇಕು ಇಲ್ಲಾಂದ್ರೆ ಮಿಸ್ ಬಯ್ತಾರೆ' ಅಂತೆಲ್ಲ ನಂಗೆ ಹೇಳ್ದಲೇ ನಿನ್ನೊಳಗೆ ನೀನೆ ಅಂದ್ಕೊಳ್ತಿರ್ತೀಯಲ್ಲ, ಅದನ್ನೇ ಮನಸ್ಸಿನೊಳಗೆ ಮಾತಾಡೋದು ಅನ್ನೋದು ಪುಟ್ಟ'

ಆ ಹುಡುಗನ ಪ್ರಶ್ನೆ ನನ್ನೊಳಗೂ ಒಂದಷ್ಟು ಪ್ರಶ್ನೆಗಳನ್ನು ಕೇಳಲಾರಂಭಿಸಿತು.

'ನಾವಿಂದು ಮನಸ್ಸಲ್ಲಿ ಮಾತಾಡೋದು ಕಮ್ಮಿ ಮಾಡಿದ್ದೀವಾ?' 'ತೋರಿಕೆಯ ಮಾತು ಮತ್ತು ಬದುಕಿಗಷ್ಟೇ ಮನ್ನಣೆ ನೀಡುತ್ತಿದ್ದೇವಾ?' 'ಮನಸ್ಸಿನ ಮಾತು ಕೇಳುವ ವ್ಯವಧಾನ ಕಳೆದುಕೊಳ್ಳುತ್ತಿದ್ದೇವಾ?' 'ಮೊಬೈಲು ಲ್ಯಾಪ್ಟಾಪ್ ನೋಟ್ಬುಕ್ಕು ಐಪಾಡುಗಳೆಂಬ ವಸ್ತುಗಳು ನಮ್ಮೊಳಗಿನ ಮಾತು ಕಸಿದುಕೊಳ್ಳುತ್ತಿವೆಯಾ?'

ಪುಟಾಣಿ ಕೇಳಿದ ಆ ಒಂದು ಪ್ರಶ್ನೆಯ ಮನಸ್ಸಿನೊಳಗೆ ಇನ್ನೆಷ್ಟು ಪ್ರಶ್ನೆಗಳಿದ್ದವೋ? ಆ ಅಪ್ಪನೂ ಮಗನೂ ಮೊಬೈಲು ಮೋಹಿತರಾಗಿದ್ದರೆ, ಅವರಿಬ್ಬರ ನಡುವಿನ ಒಂದೊಳ್ಳೆ ಮಾತುಕತೆ ನನ್ನಂತಹವನ ಕಿವಿಗೆ ಬೀಳುವ ಸಾಧ್ಯತೆ ಇತ್ತೆ? ಮೊಬೈಲು ಮನಸ್ಸಿನ ಮಾತು ಕಸಿದುಕೊಳ್ಳುವುದರೊಂದಿಗೆ ಮಕ್ಕಳ ಪ್ರಶ್ನೆಗಳನ್ನೂ ಪಕ್ಕಕ್ಕೆಸೆಯುವಂತೆ ಬುದ್ಧಿವಂತ ಜಗತ್ತನ್ನು ಪುಸಲಾಯಿಸುತ್ತಿದೆಯೇ?

(ಫೆಬ್ರವರಿ 2016, ಪ್ರಜಾವಾಣಿ)



# ಮುನಿಸಿಗೂ ಕಾರಣವಾಗುವ ಮೌನ

ಮೊನ್ನೆ ಊರಿನ ಹಿರಿಯರೊಬ್ಬರು ಮಗಳ ಮದುವೆ ಆಮಂತ್ರಣ ಪತ್ರಿಕೆ ನೀಡಲು ಮನೆಗೆ ಬಂದಿದ್ದರು. ನಾನು ಅವರನ್ನು ನೋಡಿಯೂ ನೋಡದಂತೆ ಅವರ ಮುಂದೆಯೇ ನಡೆದುಕೊಂಡು ರೂಮಿಗೆ ಹೋದೆ. ಅವರೇ ಬಾಯ್ತೆರೆದು, 'ನಾನ್ಯಾರು ಅಂತ ಗೊತ್ತಾಯ್ತೇನಪ್ಪ' ಅಂತ ಪ್ರಶ್ನಿಸಿದ್ರು.

'ಹ್ಞಂ... ಗೊತ್ತು' ಅಂದೆ.

'ನಿಂಗೆ ನನ್ನ ನೆನಪಿಲ್ಲ ಅನ್ಸುತ್ತೆ' ಅಂದ್ರು.

'ಇಲ್ಲ ನೆನಪಿದೆ. ಚಿಕ್ಕವನಿದ್ದಾಗ ಮೂರ್ನಾಲ್ಕು ತಿಂಗಳು ಊರಲ್ಲಿ ಕಳೆಯುತ್ತಿದ್ದೆನಲ್ಲ ಆಗ ನಿಮ್ಮ ಮನೆಗೆಲ್ಲ ಬಂದಿದ್ದೀನಿ' ಅಂದೆ.

ಅವರು ಅಮ್ಮನೊಂದಿಗೆ ಮಾತಿಗಿಳಿದರು. 'ಈಗಿನ ಹುಡುಗ್ರಿಗೆ ಮನೆಗೆ ಬಂದವ್ರುನ್ನ ಮಾತಾಡುಸ್ಬೇಕು ಅನ್ನೋದೆ ಇಲ್ಲ. ಒಳ್ಳೆ ಜಗಳ ಆಡಿ ಮಾತು ಬಿಟ್ಟವರ ಹಾಗೆ ಮುಖ ಊದಿಸಿಕೊಳ್ಳುತ್ತಾರೆ. ಮನೆಗೆ ಬಂದವ್ರಿಗೆ ಬಂದ್ರಾ ಅಂತ ಕೇಳಿ ಅಂದ್ರೆ, ಎದ್ರುಗಡೆ ಬಂದು ನಿಂತಿದ್ರೂ ಬಂದ್ರಾ ಅಂತ ಕೇಳ್ಬೇಕಾ ಎಂದು ಪ್ರಶ್ನಿಸುತ್ತಾರೆ. ಹೋಗ್ಲಿ ಚೆನ್ನಾಗಿದ್ದೀರಾ ಅಂತಾದ್ರೂ ಕೇಳ್ರೋ ಅಂದ್ರೆ, ಚೆನ್ನಾಗಿರೋದ್ಕೆ ಮತೆ ಅವ್ರು ನಮ್ಮನೆಗೆ ಬರೋದು ಅಂತಾರೆ. ಇಂಥ ಮಕ್ಳಿಗೆ ಏನಂತ ಬುದ್ಧಿ ಹೇಳೋದು' ಅಂತ ತಮ್ಮ ಅಸಮಾಧಾನ ಹೊರ ಹಾಕಿದರು. ಅವರ ಮಾತಿಗೆ ದನಿಗೂಡಿಸಿದ ನಮ್ಮಮ್ಮ, 'ಗಂಡು ಮಕ್ಳು ಹೆಂಗೋ ಹೋಗ್ಲಿ, ಈಗಿನ್ ಹೆಣ್ ಮಕ್ಳು ಕೂಡ ಮನೆಗೆ ಬಂದವ್ರುನ್ನ ಮಾತಾಡ್ಸಲ್ಲ' ಅಂತ ತಮ್ಮ ಅನಿಸಿಕೆ ಮಂಡಿಸಿದ್ರು.

ಇದಾದ ಮೇಲೆ ಊರಿನ ಹಿರಿಯರು, ‘ನಿಂಗೆ ಹಿಂಗೇಳ್ತಿದ್ದೀನಿ ಅಂತ ಬೇಜಾರು ಮಾಡ್ಕೊಬೇಡ ಕಣಪ್ಪ. ನನ್ ಮಕ್ಳು ಕೂಡ ನಿನ್ನಂಗೆ ಮಾಡ್ತಾರೆ. ನೀವೆಲ್ಲ ಮನೆಗೆ ಬರೋರನ್ನ, ಪರಿಚಯಸ್ಥರನ್ನ ಮಾತಾಡಿಸ್ದೆ ಮುಖ ಊದುಸ್ಕೊಂಡಿರೋದು ನೋಡಿದ್ರೆ ಮನಸ್ಸಿಗೆ ನೋವಾಗುತ್ತೆ’ ಅಂತ ತಮ್ಮ ನೋವು ತೋಡಿಕೊಂಡ್ರು.

ಅವರು ಹೇಳಿದ್ದೆಲ್ಲ ಸರಿಯೇ. ಆದರೆ ಉದ್ದೇಶಪೂರಕವಾಗಿ ಅವರ ಮನಸ್ಸಿಗೆ ನೋವುಂಟು ಮಾಡುವ ಸಲುವಾಗಿ ನಾನು ಹಾಗೆ ವರ್ತಿಸಿರಲಿಲ್ಲ. ನನ್ನ ವ್ಯಕ್ತಿತ್ವದೊಂದಿಗೆ ಬೆಸೆದುಕೊಂಡಿರುವ ಅಂಜಿಕೆಯಿಂದಾಗಿ ನಾನಾಗೇ ಅವರನ್ನು ಮಾತಾಡಿಸಲು ಮುಂದಾಗಿರಲಿಲ್ಲ. ಅದು ಇಷ್ಟೆಲ್ಲ ಅಪಾರ್ಥಕ್ಕೆ ಎಡೆ ಮಾಡಿಕೊಡುತ್ತದೆ ಎಂಬುದೂ ನನಗೆ ತಿಳಿದಿರಲಿಲ್ಲ.

(ಅಕ್ಟೋಬರ್ 2014, ವಿಜಯವಾಣಿ)



# ಓದು ಮತ್ತು ಅಮ್ಮನ ಭಕ್ತಿ

ದೇವರಿಗೆ ಹತ್ತಿರವಾಗುವ ಸಲುವಾಗಿ ನಡೆಸುವ ಯಾವುದೇ ಕಸರತ್ತಿನ ಕುರಿತೂ ಒಲವಿಲ್ಲದ ನನ್ನನ್ನು 'ಬಾರೋ ಪೂಜೆ ಮಾಡು' ಅಂತ ಕರೆಯುವ ಗೋಜಿಗೆ ನಮ್ಮಮ್ಮ ಹೋಗುವುದಿಲ್ಲ. ಆದರೆ, ಪೂಜೆ-ಪುನಸ್ಕಾರದಲ್ಲಿ ಚೂರುಪಾರು ಆಸಕ್ತಿವುಳ್ಳ ತಮ್ಮನಿಗೆ ಆಗಾಗ ಪೂಜೆಗೆ ಕರೆಯೋಲೆ ದೊರೆಯುತ್ತಿರುತ್ತದೆ. ಈ ಬಾರಿ ಗೌರಿ-ಗಣೇಶ ಹಬ್ಬದ ಸಂದರ್ಭದಲ್ಲೂ ಪೂಜೆ ಮಾಡಲು ಅವನಿಗೆ ಅಮ್ಮನಿಂದ ಬುಲಾವ್ ಬಂತು. ದೇವರ ಮನೆಗೆ ಹೋದ ತಮ್ಮ 'ಇದೇನಮ್ಮ ಯಾವ್ದೋ ಕಾಲ್ದಲ್ಲಿ ನಾವು ಬಳಸುತ್ತಿದ್ದ ನೋಟ್ ಬುಕ್ಕನ್ನೆಲ್ಲ ಇಟ್ಟು ಪೂಜೆ ಮಾಡಿದ್ದೀರಿ' ಅಂತ ಹುಬ್ಬೇರಿಸಿದ. 'ಹೌದು ಕಣೋ, ಈ ಹಬ್ಬಕ್ಕೆ ಬುಕ್ ಇಟ್ಟು ಪೂಜೆ ಮಾಡ್ಬೇಕು' ಎಂದರು ನಮ್ಮಮ್ಮ. 'ಅಯ್ಯೋ... ಈಗ ನಮ್ದೆಲ್ಲ ಓದು ಮುಗ್ದಿಲ್ವಾ?' ಅಂದ. 'ಕಾಲೇಜ್ಗೆ ಹೋಗಿ ಓದೋದು ಮುಗ್ದಿರ್ಬಹುದು. ಆದ್ರೆ ಈಗ್ಲೂ ಅದೇನೇನೋ ಓದಲ್ವಾ ನೀವು' ಅಂತ ಮರು ಪ್ರಶ್ನೆ ಹಾಕಿದರು. ತಮ್ಮ ನಕ್ಕು ಪೂಜೆ ಮಾಡಲು ಅಣಿಯಾದ.

ಎಂದಿಗೂ ಮುಗಿಯದ ನಮ್ಮ ಓದಿಗೂ, ಎಂದಿಗೂ ಕೊನೆಗೊಳ್ಳದ ಅಮ್ಮನ 'ವಿದ್ಯೆ'ಯೆಡೆಗಿನ ಭಕ್ತಿಗೂ ಏನಾದರೂ ಸಂಬಂಧವುಂಟೇ ಎಂದು ಹುಬ್ಬೇರಿಸುವ ಸರದಿ ಇದೀಗ ನನ್ನದು!

(ಸೆಪ್ಟೆಂಬರ್ 2016, ಕನ್ನಡಪ್ರಭ)



# ವಿದ್ಯಾರ್ಥಿ ಬೋಧಿಸಿದ ಮಾನವೀಯ ಪಾಠ

ಕಾಲೇಜು ಸ್ಟಾಫ್ ರೂಮಿನ ಬಳಿ ನಿಂತುಕೊಂಡು ಉಪನ್ಯಾಸಕರಾದ ನಾವೆಲ್ಲಾ ಹರಟುತ್ತಿದ್ದೆವು. ಪಾರ್ಕಿಂಗ್ ಸ್ಥಳದಲ್ಲಿ ವ್ಯಕ್ತಿಯೊಬ್ಬರು ಕುಸಿದು ಬಿದ್ದದ್ದು ನಮ್ಮ ಕಣ್ಣಿಗೆ ಬಿತ್ತು. ಅವರಿಗೆ ಏನಾಯ್ತು ಅಂತ ನಿಂತಲ್ಲಿಂದಲೇ ಪರಿಶೀಲಿಸ ಲಾರಂಭಿಸಿದೆವು. ಅಲ್ಲೇ ಹತ್ತಿರದಲ್ಲಿದ್ದ ಮೂರ್ನಾಲ್ಕು ಜನ ಅವರ ಬಳಿ ಹೋಗಿ ವಿಚಾರಿಸಲಾರಂಭಿಸಿದರು. ಅಳೆದು ತೂಗಿ ನೋಡಿ ಕೊನೆಗೂ ನಾವು ನಿಂತಲ್ಲಿಂದ ಕದಲಿ ಅವರ ಬಳಿ ತೆರಳಿದೆವು.

ಲೋ ಬಿಪಿಯಿಂದಾಗಿ ಅವರು ಅಸ್ವಸ್ಥಗೊಂಡಿರಬಹುದೆಂದು ಅಲ್ಲಿದ್ದವರು ಊಹಿಸಿದರು. ಕೂಡಲೇ 'ಆಸ್ಪತ್ರೆಗೆ ಕರೆದೊಯ್ಯಬೇಕು. ಆಟೋ ಕರೆಯಿರಿ' ಅಂತ ಯಾರೋ ಅಂದರು. ನಾವ್ಯಾರೂ ಪ್ರತಿಕ್ರಿಯಿಸಲಿಲ್ಲ. ಅಲ್ಲಿದ್ದ ಒಂದಿಬ್ಬರು ವಿದ್ಯಾರ್ಥಿಗಳು ಕೂಡಲೇ ಆಟೋ ಕರೆಯಲು ಹೋದರು. ಆಟೋ ಬಂತು. ಕುಸಿದು ಬಿದ್ದಿದ್ದ ವ್ಯಕ್ತಿಯನ್ನು ಬಲ್ಲವರೊಬ್ಬರು ಮಾತ್ರ ಅಲ್ಲಿದ್ದರು. ಅಸ್ವಸ್ಥ ವ್ಯಕ್ತಿಯನ್ನು ಆಟೋಗೆ ಕೂರಿಸಲು ಸಹಾಯ ಮಾಡಿ ಅಂತ ಅವರು ಕೋರಿದರು. ನಾವು ಸಹಾಯ ಮಾಡುವುದೋ ಬೇಡವೋ ಅಂತ ಮೀನಾಮೇಷ ಎಣಿಸುವಷ್ಟರಲ್ಲಿ ವಿದ್ಯಾರ್ಥಿಯೊಬ್ಬ ಅವರೊಂದಿಗೆ ಕೈಜೋಡಿಸಿ ಅಸ್ವಸ್ಥ ವ್ಯಕ್ತಿಯನ್ನು ಆಟೋಗೆ ಕೂರಿಸುವಲ್ಲಿ ನೆರವಾದ.

ಅವನು ನಮ್ಮ ವಿದ್ಯಾರ್ಥಿ. ಕ್ಲಾಸಿಗೆ ಸರಿಯಾಗಿ ಬರುತ್ತಿರಲಿಲ್ಲ. ಎಷ್ಟೋ ವಿಷಯಗಳಲ್ಲಿ ಫೇಲ್ ಆಗಿದ್ದ. ಕ್ಲಾಸಿನಲ್ಲಿ ಏನೇ ಹೇಳಿದರೂ ಗಂಭೀರವಾಗಿ ಪರಿಗಣಿಸದೆ ಉಡಾಫೆ ತೋರುತ್ತಿದ್ದ. ಅವನ ಕುರಿತು ಉಪನ್ಯಾಸಕರಾದ ನಾವೆಲ್ಲ ನಕಾರಾತ್ಮಕ ಅಭಿಪ್ರಾಯವನ್ನೇ ಹೊಂದಿದ್ದೆವು. ಆದರೆ ಈ ಪ್ರಕರಣ, ನಮ್ಮೆಲ್ಲರ

ನಕಾರಾತ್ಮಕ ಗುಣ ಮತ್ತು ಆ ವಿದ್ಯಾರ್ಥಿಯೊಳಗಿನ ಮಾನವೀಯ ಗುಣವನ್ನು ಅನಾವರಣಗೊಳಿಸಿತು. ಕ್ಲಾಸ್ರೂಮಿನಲ್ಲಿ ವಿದ್ಯಾರ್ಥಿಗಳಿಗೆ ನೀತಿ ಪಾಠ ಬೋಧಿಸುವ ನಾವು, ಅದನ್ನು ಕಾರ್ಯರೂಪಕ್ಕೆ ತರುವ ಸಂದರ್ಭದಲ್ಲಿ ಸಂಕುಚಿತ ಮನೋಭಾವ ಪ್ರದರ್ಶಿಸಿದೆವು. ಕ್ಲಾಸ್ ರೂಂನಲ್ಲಿ ಅಶಿಸ್ತು ಪ್ರದರ್ಶಿಸುತ್ತಿದ್ದ ವಿದ್ಯಾರ್ಥಿ ಬದುಕಿನ ಪಾಠಶಾಲೆಯಲ್ಲಿ ಸಂಯಮ ತೋರಿ ನಮಗೆಲ್ಲ ಮಾನವೀಯ ಪಾಠ ಹೇಳಿಕೊಟ್ಟ.

(ಆಗಸ್ಟ್ 2014, ಕನ್ನಡಪ್ರಭ)



# ಯಾರದು 'ಕಿರಿಕಿರಿ'?

ಸಾಧ್ಯವಾದಷ್ಟು ಬೇಗ ಗುರಿ ತಲುಪುವ ಉಮೇದಿನೊಂದಿಗೆ ಬಸ್ಸು ಚಲಿಸುತ್ತಿತ್ತು. ಅದರೊಳಗೆ ಜಮೆಯಾಗಿದ್ದವರೆಲ್ಲ ತಮ್ಮದೇ ಲೋಕಗಳಲ್ಲಿ ಮುಳುಗಿದ್ದರು. ವಯೋವೃದ್ಧ ದಂಪತಿ ಮಾತ್ರ ಏರು ದನಿಯಲ್ಲಿ ಹರಟುತ್ತಿದ್ದರು. ತಮ್ಮ ಸಹಪ್ರಯಾಣಿಕರೊಬ್ಬರ ಜೊತೆ ಉಭಯಕುಶಲೋಪರಿ ಶುರುಹಚ್ಚಿಕೊಂಡಿದ್ದರು. 'ನಿಮ್ಮೂರಲ್ಲಿ ನಮ್ ನೆಂಟ್ರು ಒಬ್ರಿದಾರೆ' ಅಂತಂದ ಸಹಪ್ರಯಾಣಿಕನ ಮಾತಿಗೆ, 'ಅಯ್ಯೋ...! ಈಗ ನಮ್ಗೆ ನಮ್ ಮನೆ ಹಿಂದೆ ಮುಂದೆ ಇರೋ ಎರಡು ಬೀದಿ ಬಿಟ್ರೆ ಉಳಿದವರ್ಯಾರೂ ಗೊತ್ತೇ ಇರಲ್ಲ ಬಿಡಿ' ಎನ್ನುವ ಮೂಲಕ ಮನುಷ್ಯರೊಂದಿಗೆ ಹೆಚ್ಚು ಒಡನಾಡಲು ಅನುವು ಮಾಡಿಕೊಡದ ವರ್ತಮಾನದ ಬದುಕುವ ಶೈಲಿ ಕುರಿತು ತಮ್ಮ ಅಸಮಾಧಾನ ಹೊರಹಾಕುತ್ತಿದ್ದರು.

ವಯೋವೃದ್ಧ ದಂಪತಿ ಹಾಗು ಅವರ ಪಕ್ಕದಲ್ಲೇ ಕುಳಿತಿದ್ದ ಸಹಪ್ರಯಾಣಿಕನೊಬ್ಬನ ನಡುವಿನ ಹರಟೆಯಿಂದ ತನ್ನ ನೆಮ್ಮದಿಗೆ ಭಂಗವಾಗುತ್ತಿದೆ ಅಂತಲೇ ಭಾವಿಸಿದ ಮತ್ತೊಬ್ಬ ಪ್ರಯಾಣಿಕ, 'ನಿಮ್ ಕಂತೆ ಪುರಾಣನಾ ಮಲ್ಲೋಗಿ ಮಾತಾಡ್ಕಳಿ. ಈಗ ಸ್ವಲ್ಪ ಸುಮ್ನೆ ಕೂತ್ಕೊಳಿ. ನೀವು ಹೀಗೆ ವಟ ವಟ ಅಂತ ಮಾತಾಡೋಕೆ ಇದು ನಿಮ್ ಮನೆ ಅಲ್ಲ ಬಸ್ಸು' ಎಂದು ಗದರಿದ. ಮಧ್ಯವಯಸ್ಕ ವ್ಯಕ್ತಿಯೊಬ್ಬನ ಗದರಿಕೆಗೆ ಅವನ ಅಕ್ಕಪಕ್ಕ ಕುಳಿತಿದ್ದ ಒಂದಿಬ್ಬರು ಸಹಪ್ರಯಾಣಿಕರಿಂದ ಪ್ರಶಂಸೆಯೂ ವ್ಯಕ್ತವಾಯಿತು. ಮಾಗಿದ ಅನುಭವಗಳನ್ನು ತಮ್ಮ ಜೋಳಿಗೆಯಲ್ಲಿ ತುಂಬಿಟ್ಟುಕೊಂಡವರಂತೆ ತೋರುತ್ತಿದ್ದ ಆ ದಂಪತಿ ಆನಂತರ ಮತ್ತೆ ಮಾತನಾಡುವ ಗೋಜಿಗೆ ಹೋಗಲೇ ಇಲ್ಲ. ತಮ್ಮ ಊರಿನ ಸ್ಟಾಪು ಬರುವವರೆಗೂ ಸುಮ್ಮನಿದ್ದು ಎದ್ದು ಹೋದರು.

ಇಡೀ ಬಸ್ಸಿಗೇ ಕೇಳುವಂತೆ ಸೌಂಡು ಕೊಟ್ಟುಕೊಂಡು ಯಾರೋ ಒಬ್ಬ ತನ್ನ ಮೊಬೈಲಿನಲ್ಲಿ ಸಿನಿಮಾ ನೋಡುವುದಕ್ಕೆ ಯಾವುದೇ ಆಕ್ಷೇಪ ವ್ಯಕ್ತಪಡಿಸದ ಅವನಿಗೆ, ಹಳ್ಳಿ ಬದುಕಿನ ರಾಯಭಾರಿಗಳಂತಿದ್ದ ಈ ಅಜ್ಜ-ಅಜ್ಜಿ ಮಾತು ಅದ್ಯಾಕೆ ಆ ಪರಿಯ 'ಕಿರಿಕಿರಿ'ಯನ್ನು ದಯಪಾಲಿಸಿತೋ? ಕೊನೆಗೂ ಕಾರಣ ತಿಳಿಯಲೇ ಇಲ್ಲ.

(ಸೆಪ್ಟೆಂಬರ್ 2016, ಪ್ರಜಾವಾಣಿ)



## ಬದುಕಿಗೂ ರ್‍ಯಾಂಕಿಗೂ ಸಂಬಂಧವುಂಟೇ?

ಮೊನ್ನೆ ಬೇಕರಿಯಲ್ಲಿ ಕುರುಕಲು ತಿನ್ನುತ್ತ ಕುಳಿತಿದ್ದೆ. ಅಲ್ಲಿಗೆ ಬಂದ ಆಸಾಮಿಯೊಬ್ಬ 'ಸ್ಮಾಲ್' ಕೊಡಿ ಎಂದ. ಬೇಕರಿಯವನು 'ಸ್ಮಾಲ್ ಖಾಲಿಯಾಗಿದೆ, ಕಿಂಗ್ ಮುಟ್ಟಲ್ವಾ' ಅಂತ ಕೇಳ್ದ. 'ಟೈಟಾಗಿ ಬಂದ್ ದಿನಾನೇ ಸ್ಮಾಲ್ ಇಲ್ವಲ್ಲಾ ಛೇ...' ಅಂತ ಬೇಸರ ವ್ಯಕ್ತಪಡಿಸಿದ. ಅದಕ್ಕೆ ಬೇಕರಿಯವನು, 'ಓ ಇವತ್ತು ನಿಮ್ ಮಗನ್ದು ರಿಸಲ್ಟ್ ಅಲ್ವಾ?! ಮಗ ಪಾಸ್ ಆಗಿದ್ ಖುಷಿಗೆ ಮಧ್ಯಾಹ್ನನೇ ಟೈಟ್ ಆದ್ರಾ' ಅಂತ ಕೇಳ್ದ. 'ಹೌದು, ಮಗ ಸೆವೆಂತ್ನಿಂದ ಏಯ್ತ್ಗೆ ಪಾಸ್ ಆಗವ್ನೆ, ಫಸ್ಟ್ ಕ್ಲಾಸು! ಆ ಖುಷಿಗೆ ಇವತ್ತು ಒಂದೆರ್ಡು ಪೆಗ್ ಜಾಸ್ತಿನೇ ಕುಡ್ದಿದ್ದೀನಿ' ಅಂತ ನಕ್ಕ. ಆನಂತರ ಸ್ಮಾಲ್ ಅರಸಿ ಬೇರೆ ಅಂಗಡಿಯತ್ತ ಹೆಜ್ಜೆ ಹಾಕಿದ.

ನನ್ನ ಪಕ್ಕದಲ್ಲಿ ಕುಳಿತು 'ಕಿಂಗ್' ಸುಡುತ್ತಿದ್ದ ಯುವಕರಿಬ್ಬರು, 'ಈ ಜನುದ್ ಮೆಂಟಾಲಿಟಿಗೆ ಏನ್ ಹೇಳೋಣ... ಕರ್ಮ' ಅಂತೇಳಿ ಸಿಡುಕಿದರು.

ಇದನ್ನೆಲ್ಲ ಗಮನಿಸಿದ ನಾನು, ಅಲ್ಲೇ ಇದ್ದ ಕ್ಯಾಲೆಂಡರ್‌ನತ್ತ ಕಣ್ಣು ಹಾಯಿಸಿದೆ. 'ಓಹ್ ಇವತ್ತು ಏಪ್ರಿಲ್ 10 ಅಲ್ವಾ...!' ಅಂತ ಒಳಗೊಳಗೇ ಅಂದುಕೊಂಡೆ. ಬಾಲ್ಯದ 'ರಿಸಲ್ಟ್ ಡೇ' ನೆನಪುಗಳು ಕಣ್ಣೆದುರು ಸುಳಿಯಲಾರಂಭಿಸಿದವು.

ನಮ್ಮ ಬೀದಿಯಲ್ಲಿ 'ಬುದ್ಧಿ' ಜೀವಿಗಳು ಬಹುಸಂಖ್ಯಾತರಾಗಿದ್ದ ಕಾರಣ, ಆ ರಿಸಲ್ಟ್ ದಿನಗಳಲ್ಲಿ ಅವರಿವರಿಂದ ಮಂಗಳಾರತಿ, ಪರೋಕ್ಷ ಹೀಯಾಳಿಕೆ ಮಾಮೂಲಾಗಿತ್ತು. ಬೇಸಿಗೆ ರಜೆಯ ಮೂಡ್ನಲ್ಲಿ ಬಿಂದಾಸ್ ಆಗಿರುತ್ತಿದ್ದ ನಾವು, ಒಂದೆರಡು ದಿನ ಮುಖದ ತುಂಬ ಮಂಕು ಬಳಿದುಕೊಂಡು ತಿರುಗುತ್ತಿದ್ದೆವು. ಮುಂದಿನ ವರ್ಷದಿಂದ ನೆಟ್ಟಗೆ ಓದಿ ನಮ್ಮ ಬೀದಿಯ 'ಬುದ್ಧಿ'ಜೀವಿಗಳಿಗೆ ಸರಿಸಮನಾಗಿ ನಿಲ್ಲಬೇಕೆಂಬ ದೃಢಸಂಕಲ್ಪ ಹೊಂದುತ್ತಿದ್ದೆವು. ಆ ನೆಟ್ಟಗೆ ಓದುವ

ವರ್ಷವೆಂಬುದು ಪ್ರತಿ ಬಾರಿಯೂ ಮುಂದಿನ ವರ್ಷದ ಹೆಗಲೇರುತ್ತಿದ್ದ ಪರಿಣಾಮ, 'ಬುದ್ಧಿ'ಜೀವಿಗಳ ಸಾಲಿನಿಂದ ಬಹಿಷ್ಕೃತರಾಗಿ 'ಲದ್ದಿ' ಜೀವಿಗಳಾಗೆ ಉಳಿದು ಬಿಟ್ಟಿದ್ದೆವು. ಸಾಲದ್ದಕ್ಕೆ ನಮ್ಮ ಹೊಟ್ಟೆ ಉರಿಸಲೆಂದೇ ಕೆಲ 'ಬುದ್ಧಿ'ಜೀವಿಗಳ ತಂದೆ-ತಾಯಿ, ತಮ್ಮ ಮಕ್ಕಳು ರ್‍ಯಾಂಕ್ ಪಡೆದು ಪಾಸಾದ ಖುಷಿಯನ್ನು ತಮ್ಮ ಮನೆಗೆ ಸೀಮಿತಗೊಳಿಸಿಕೊಳ್ಳಲು ಸಾಧ್ಯವಾಗದೇ ನಮ್ಮ ಮನೆಗಳಿಗೆಲ್ಲ ತಮ್ಮ ಮಕ್ಕಳನ್ನು ಕರೆತಂದು ಸಿಹಿ ಹಂಚಿ ಬೀಗುತ್ತಿದ್ದರು. 'ನಿಮ್ಮ ಮಕ್ಕಳ ಮಾರ್ಕ್ಸ್ ಎಷ್ಟು' ಎಂಬ ಪ್ರಶ್ನೆ ಒಗೆದು, ತಮ್ಮ ಮಕ್ಕಳ ಮುಂದೆ ಇವೆಲ್ಲ ನಾಲಾಯಕ್ಕು ಎಂಬಂತೆ ಮುಖ ತಿರುವಿ, ವ್ಯಂಗ್ಯದ ನಗು ನಕ್ಕು ತೆರಳುತ್ತಿದ್ದರು.

ರ್‍ಯಾಂಕ್ ಸ್ಟೂಡೆಂಟುಗಳಲ್ಲದ ನಾವು ತೀರಾ ಜಸ್ಟ್ ಪಾಸಾಗುವಷ್ಟು ದಡ್ಡರೇನು ಆಗಿರಲಿಲ್ಲವಾದರೂ, ರ್‍ಯಾಂಕ್ ಜೀವಿಗಳ ಆರ್ಭಟದೆದುರು ಮಂಕಾಗಿ ಬಿಡುತ್ತಿದ್ದೆವು. ನಮ್ಮ ಆರಕ್ಕೇರದ ಮೂರಕ್ಕಿಳಿಯದ ರಿಸಲ್ಟ್ ಕಂಡು ಹೇಗೋ ತೆಪ್ಪಗಿರುತ್ತಿದ್ದ ಅಮ್ಮನ ಮೇಲೂ ಇವರು ಸಾಕಷ್ಟು ಪ್ರಭಾವ ಬೀರುತ್ತಿದ್ದರು. ಅದರ ಅಡ್ಡ ಪರಿಣಾಮವಾಗಿ ಒಂದಷ್ಟು ಬೈಗುಳಗಳು ನಮ್ಮ ಕಿವಿಗಳ ಮೇಲೆ ಬೀಳುತ್ತಿದ್ದವು. 'ಮುಂದಿನ ಸಲ ಹೀಗೆ ಮಾಡಲ್ಲ. ಅವತ್ತಿಂದು ಅವತ್ತೇ ಓದಿ ರ್‍ಯಾಂಕ್ ತೆಗಿತೀವಿ' ಅಂತ ಬೂಸಿ ಬಿಟ್ಟು ಬೀಸುವ ದೊಣ್ಣೆಯಿಂದ ಪಾರಾಗುತ್ತಿದ್ದೆವು.

ಈ ನಡುವೆ ನಮ್ಮದೆಲ್ಲಿ ಇಡೋಣ ಅಂತ ಬರುತ್ತಿದ್ದ ಕೆಲ ಹಿತೈಷಿಗಳು, ನಮ್ಮೆದುರು ರ್‍ಯಾಂಕ್ ತೆಗೆದವರ ಗುಣಗಾನ ಮಾಡಿ, ಅವರನ್ನು ನೋಡಾದರೂ ಕಲಿಯುವಂತೆ ಮಾತಿನಲ್ಲೇ ತಿವಿಯುತ್ತಿದ್ದರು. ನಮ್ಮನೆಯವರೇ ಸುಮ್ಮನಿರುವಾಗ ಇವರೇನು ಕಡ್ಡಿ ಆಡಿಸೋದು ಅಂತ ಒಳಗೊಳಗೇ ಗೊಣಗಿಕೊಂಡು ಸುಮ್ಮನಾಗುತ್ತಿದ್ದೆವು.

ಈಗ ಅಂದು ರ್‍ಯಾಂಕ್ ತೆಗೆದು ಬೀಗುತ್ತಿದ್ದವರೆಲ್ಲ ಏನಾದರೂ ಘನಂದಾರಿ ಕೆಲಸ ಮಾಡಿ ವರ್ಲ್ಡ್ ಫೇಮಸ್ ಆಗವ್ರಾ ಅಂತ ನೋಡೋಕೋದ್ರೆ ಒಳಗೊಳಗೇ ನಗು ಬರುತ್ತೆ. ಬದುಕಿಗೂ ರ್‍ಯಾಂಕಿಗೂ, ನೆಮ್ಮದಿಗೂ ಗಳಿಕೆಗೂ... ಭ್ರಮೆಗೂ ವಾಸ್ತವಕ್ಕೂ ಇರುವಷ್ಟೇ ಅಂತರವಿದೆ ಎಂಬ ಸತ್ಯ ಕಣ್ಣಿಗೆ ರಾಚುತ್ತದೆ.

(ಜುಲೈ 2015, ಉದಯವಾಣಿ)



## ಬೇಜಾರು ಮಾಡದ ಪೆನ್!

ಮೊಬೈಲಿಗೆ ಕರೆನ್ಸಿ ಹಾಕಿಸಲೆಂದು ಅಂಗಡಿಯೊಂದರ ಬಳಿ ನಿಂತಿದ್ದೆ. ಅಂಗಡಿಯವನ ಸೂಚನೆಯಂತೆ ಅವನು ಕೈಗಿಟ್ಟ ಮೊಬೈಲಿನಲ್ಲಿ ನನ್ನ ಮೊಬೈಲ್ ಸಂಖ್ಯೆ ಟೈಪಿಸುವ ಕಾರ್ಯದಲ್ಲಿ ತಲ್ಲೀನನಾಗಿದ್ದೆ. ಅಲ್ಲಿಗೆ ಬಂದ ಮಧ್ಯವಯಸ್ಕರೊಬ್ಬರು 'ಒಂದು ಪೆನ್ ಕೊಡಿ' ಎಂದು ಕೇಳಿದರು. ಅಂಗಡಿಯವನು 'ಹತ್ರುಪಾಯ್ದು ಕೊಡ್ಲಾ ಸರ್' ಅಂತ ವಿಚಾರಿಸಿದರು. ಅದಕ್ಕವರು 'ಬೇಡ ಬೇಡಾ... ಕಳ್ದು ಹೋದ್ರೆ ಬೇಜಾರಾಗ್ತಾರ್ದು... ಅಂಥದೊಂದು ಪೆನ್ ಕೊಡಿ' ಅಂದ್ರು. ಅವರ ಮಾತಿನ ಒಳಾರ್ಥ ಅರಿತ ಅಂಗಡಿಯವನು ಐದು ರೂಪಾಯಿಯ ಪೆನ್ ತೆಗೆದು ಅವರ ಕೈಗಿಟ್ಟ.

(ಜುಲೈ 2016, ತುಷಾರ)



## 'ಬಿಲ್'ಕುಲ್ ಸಂಬಂಧ

ಸ್ನೇಹಿತರೊಬ್ಬರ ಸ್ಟೇಷನರಿಯಲ್ಲಿ ಅವರೊಂದಿಗೆ ಹರಟುತ್ತ ಕುಳಿತಿದ್ದೆ. ಆಗಾಗ ಗ್ರಾಹಕರು ಬಂದು ತಮಗೆ ಬೇಕಾದ್ದನ್ನು ಖರೀದಿಸಿ ಹೋಗುತ್ತಿದ್ದರು. ಹೀಗೆ ನೋಟ್ ಬುಕ್ಕು, ಫೈಲು, ಪೆನ್ನು ಇತ್ಯಾದಿ ಕೊಳ್ಳಲು ಬಂದ ಬಾಲಕಿಯರಿಬ್ಬರು ತಮಗೆ ಬೇಕಾದ್ದನ್ನೆಲ್ಲ ಖರೀದಿಸಿದ ನಂತರ, 'ಎಷ್ಟಾಯ್ತು' ಅಂತ ಕೇಳಿ ಹಣ ನೀಡುವ ಮುನ್ನ 'ಬಿಲ್ ಕೊಡಿ' ಎಂದು ಕೇಳಿದರು. ಸಾಮಾನ್ಯವಾಗಿ ಅಲ್ಲಿಗೆ ಬರುವ ಗ್ರಾಹಕರು ಬಿಲ್ ಕೇಳುವುದಿಲ್ಲವಾದ್ದರಿಂದ ಫ್ರೆಂಡ್ಗೆ ಅಚ್ಚರಿಯಾಯಿತು. ಅವರು ಕಾರಣ ಕೇಳುವ ಗೋಜಿಗೆ ಹೋಗಲಿಲ್ಲವಾದರೂ ಆ ಬಾಲಕಿಯರೇ ತುಂಬು ಉತ್ಸಾಹದಿಂದ, 'ಮನೆಯವ್ರಿಗೆ ಬಿಲ್ ತೋರುಸ್ಬೇಕು. ಅವ್ರು ಕೊಡೋ ದುಡ್ಡುನ್ನ ನಾವು ಯಾವುದಕ್ಕೆ ಖರ್ಚು ಮಾಡ್ತೀವಿ ಅನ್ನೋದು ಅವ್ರಿಗೂ ಗೊತ್ತಾಗ್ಬೇಕಲ್ಲ' ಅಂತ ಹೇಳಿಕೊಂಡ್ರು. ಅವರ ಮಾತು ಕೇಳಿ ಆ ಕ್ಷಣಕ್ಕೆ ಏನೆಂದು ಪ್ರತಿಕ್ರಿಯಿಸಬೇಕೆಂದು ತಿಳಿಯದೆ ನಾವೆಲ್ಲರೂ ಸುಮ್ಮನಿದ್ದೆವು.

ಅವರಿಬ್ಬರೂ ಬಿಲ್ ಪಡೆದು ಅಲ್ಲಿಂದ ಹೊರಡಲು ಮುಂದಾದ ಕೂಡಲೇ, 'ನೋಡಿ ಸಾರ್ ಹೇಗಿದ್ದಾರೆ' ಅಂತ ಅಲ್ಲಿದ್ದವರೊಬ್ಬರು ಆ ಹುಡುಗಿಯರ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದರು. ನಾನು ನನಗೇನು ಇದು ಸರಿ ಕಾಣಲಿಲ್ಲವೆಂಬಂತೆ ಮುಖ ಕಿವುಚಿ, 'ಮನೆಯವ್ರಿಗೆ ಲೆಕ್ಕ ಕೊಡೋದೇನೊ ಸರಿ. ಆದ್ರೆ ಈ ಥರ ಬಿಲ್ ತೋರ್ಸೇ ಲೆಕ್ಕ ಕೊಡ್ಬೇಕು ಅನ್ನೋದಾದ್ರೆ, ಹೆತ್ತವರಿಗೆ ತಮ್ಮ ಮಕ್ಕಳ ಮೇಲೆ ಅಷ್ಟೂ ನಂಬಿಕೆ ಇಲ್ವಾ ಅನ್ನೋ ಪ್ರಶ್ನೆನೂ ಕಾಡುತ್ತೆ. ರಕ್ತ ಸಂಬಂಧಗಳ ನಡುವೆ ನಂಬಿಕೆ ಇಲ್ದಿದ್ ಮೇಲೆ ಈ ಥರ ಲೆಕ್ಕ ಕೊಟ್ಟುಕೊಂಡು ಸಂಬಂಧಗಳನ್ನು ಉಳಿಸಿಕೊಂಡು ಹೋಗೋಕೆ ಆಗುತ್ತಾ' ಅಂತ ನನ್ನಲ್ಲಿನ ನಿಲುವು ಹೊರಗೆಡವಿದೆ. ಆ ಹುಡುಗಿಯರು ಒಂದೆರಡು ಮಾರು ದೂರದಲ್ಲೇ ನಿಂತಿರುವುದು ಆನಂತರ ನನ್ನ ಗಮನಕ್ಕೆ

ಬಂತು. ನನ್ನ ಮಾತು ಅವರ ಕಿವಿಗೂ ಬಿದ್ದಿದ್ದರೆ ಅವರ ಮನಸ್ಸಿಗೆಷ್ಟು ನೋವಾಗಿರಬಹುದೆಂದು ಒಳಗೊಳಗೇ ಕೊರಗಿದೆ.

ಆದರೂ ನನ್ನೊಳಗೆ ಒಂದಷ್ಟು ಪ್ರಶ್ನೆಗಳು ಮಿಸುಕಾಡಲಾರಂಭಿಸಿದವು. 'ಬಿಲ್ ಏಕೆ ಕೇಳ್ತಿದ್ದೀರಿ?' ಅಂತ ಕೇಳುವ ಮುನ್ನವೇ ಅವರು ಕಾರಣ ನೀಡಿದ್ದರ ಹಿಂದೆ, ತಾವು ತಮ್ಮ ತಂದೆ-ತಾಯಿಗೆ ಎಲ್ಲ ರೀತಿಯಲ್ಲೂ ಉತ್ತರದಾಯಿಯಾಗಿದ್ದೇವೆ ಎಂಬುದನ್ನು ಜಗತ್ತಿನೆದುರು ಪ್ರದರ್ಶಿಸುವ ಉಮೇದು ಇರುವಂತೆ ತೋರಿತು. ಇಲ್ಲವಾದರೆ ಅವರು ಕಾರಣ ತಿಳಿಸದೆಯೂ ಬಿಲ್ ಪಡೆಯಬಹುದಿತ್ತು.

ಈ ಪ್ರಸಂಗದ ಹಿನ್ನೆಲೆಯಲ್ಲಿ, ನಾನು ಇಂತಹ ಸನ್ನಿವೇಶಗಳಲ್ಲಿ ಏನೆಲ್ಲ ಮಾಡಿದ್ದೆ ಅಂತ ನೆನಪಿಸಿಕೊಂಡೆ. ಸಾಮಾನ್ಯವಾಗಿ ಅಂಗಡಿಗೆ ಕಳುಹಿಸಿದರೆ ಮನೆಯಲ್ಲಿ ಎಷ್ಟಾಯ್ತು ಅಂತ ಕೇಳಿ ಉಳಿದ ಚಿಲ್ಲರೆ ಪಡೆಯುತ್ತಿದ್ದರು. ಲೆಕ್ಕವನ್ನೂ ಕೇಳುತ್ತಿದ್ದರು. ನಾವು ಸುಳ್ಳು ಹೇಳಿ ದುಡ್ಡು ಉಳಿಸಿಕೊಳ್ಳುತ್ತೇವೆ ಅನ್ನುವುದಕ್ಕಿಂತ, ಅಂಗಡಿಯವರಿಂದ ಇವರೆಲ್ಲಿ ಮೋಸ ಹೋಗಿದ್ದಾರೊ ಅಂತ ಪರಿಶೀಲಿಸೋದು ಅವರ ಮುಖ್ಯ ಉದ್ದೇಶವಾಗಿರುತ್ತಿತ್ತು. ಅಪರೂಪಕ್ಕೊಮ್ಮೊಮ್ಮೆ ನಾವೂ ಸುಳ್ಳು ಲೆಕ್ಕ ಕೊಟ್ಟು ಕಡ್ಲೆಮಿಠಾಯಿ, ಚಾಕೊಲೇಟು ತಿನ್ನುತ್ತಿದ್ದದ್ದೂ ಉಂಟು. ಆದರೆ ಅಂಗಡಿಯವರೊಂದಿಗೆ ವ್ಯವಹರಿಸುವಷ್ಟು ಜಾಣ್ಮೆ ಇದೆ ಎಂಬುದು ತಿಳಿದ ನಂತರ ಲೆಕ್ಕ ಕೇಳುವ ಗೋಜಿಗೆ ಹೋಗದೆ ಕೊಟ್ಟಷ್ಟು ಚಿಲ್ಲರೆ ತೆಗೆದುಕೊಳ್ಳುತ್ತಿದ್ದರು. ನಮ್ಮಲ್ಲೂ ಹೀಗೆ ಪೆನ್ನು ಪೆನ್ಸಿಲ್ಲು ಒಂದೆರಡು ನೋಟ್ ಬುಕ್ಕು ತೆಗೆದುಕೊಳ್ಳುವು ದಕ್ಕೆಲ್ಲ ಬಿಲ್ ಎಂಬ ಪುರಾವೆ ಒದಗಿಸಿ ಲೆಕ್ಕ ಕೊಡಬೇಕೆಂಬ ನೈತಿಕ ಪ್ರಜ್ಞೆ(?) ಇರಲಿಲ್ಲ.

ಆ ಇಬ್ಬರು ಹುಡುಗಿಯರಲ್ಲಿ ಈ ಲೆಕ್ಕ ಕೊಡುವ ಮತ್ತದನ್ನು ಜಗತ್ತಿಗೆ ಸಾರುವ ನೈತಿಕ ಪ್ರಜ್ಞೆ ಜಾಗೃತಗೊಂಡಿದ್ದಾದರೂ ಹೇಗೆ ಮತ್ತು ಏಕೆ ಎನ್ನುವ ಪ್ರಶ್ನೆ ನನ್ನೊಳಗೆ ಹೊರಳಾಡುತ್ತಲೇ ಇದೆ. ತೋರಿಕೆಯ ನೈತಿಕತೆಗೂ ಅಂತರ್ಗತವಾಗಿ ಒಡಮೂಡುವ ನೈತಿಕತೆಗೂ ವ್ಯತ್ಯಾಸ ಇದೆ ಅಲ್ಲವೇ?

(ಜನವರಿ 2016, ಪಂಜು)



# ಚಿಲ್ಲರೆ ಸಂದಿಗ್ಧ

ಮೊನ್ನೆ ಎಳನೀರು ಕುಡಿದ ನಂತರ ಇಪ್ಪತ್ತೈದು ರೂಪಾಯಿ ಚಿಲ್ಲರೆ ಹೊಂದಿಸಬೇಕಾದ ಸಂದಿಗ್ಧ ಎದುರಾಯಿತು. ಇಪ್ಪತ್ತು ರೂಪಾಯಿಯ ಒಂದು ನೋಟು, ಅದರ ಜೊತೆಗೆ ಐದು ರೂಪಾಯಿ ಚಿಲ್ಲರೆ ನೀಡಲೆಂದು ಪರ್ಸು ತೆಗೆದು ಸಿಕ್ಕ ಚಿಲ್ಲರೆಯನ್ನೆಲ್ಲ ಪರಿಶೀಲಿಸಿ ಬಹುತೇಕ ಒಂದೇ ರೀತಿಯಲ್ಲಿದ್ದ ಐದು ನಾಣ್ಯಗಳನ್ನು ಎಳನೀರು ಮಾರುವಾತನಿಗೆ ಕೊಡುವ ಸಲುವಾಗಿ ಹೊರತೆಗೆದು ನೋಡಿದೆ. ಐದರಲ್ಲಿ ನಾಲ್ಕು ಒಂದು ರೂಪಾಯಿಯದ್ದಾದರೆ, ಉಳಿದದ್ದೊಂದು ಐವತ್ತು ಪೈಸೆಯದಾಗಿತ್ತು. ಆ ನಾಣ್ಯ ಕೂಡ ಒಂದು ರೂಪಾಯಿ ನಾಣ್ಯದ ಆಕಾರವನ್ನೇ ಹೊಂದಿದ್ದರಿಂದ ಮೊದಲಿಗೆ ಅದನ್ನೂ ಒಂದು ರೂಪಾಯಿ ಎಂದೇ ಭಾವಿಸಿದ್ದೆ. ಎಳನೀರು ಮಾರುವಾತನಿಗೆ ಇಪ್ಪತ್ತರ ಒಂದು ನೋಟು ಮತ್ತು ನಾಲ್ಕೂವರೆ ರೂಪಾಯಿ ಮೌಲ್ಯದ ನಾಣ್ಯಗಳನ್ನು ನೀಡಿ, 'ಐವತ್ತು ಪೈಸೆ ಕಡಿಮೆ ಇದೆ ಪರ್ವಾಗಿಲ್ವಾ?' ಅಂದೆ. 'ಎಷ್ಟಿದ್ಯೋ ಅಷ್ಟು ಕೊಡಿ' ಎಂದ ಅವನು, ಕೊನೆಗೆ 'ಈ ಐವತ್ತು ಪೈಸೆ ಈಗ ಎಲ್ಲೂ ನಡ್ಯಲ್ಲ. ಇದುನ್ನ ನೀವೇ ಇಟ್ಕೊಳಿ' ಅಂದುಬಿಟ್ಟ. ಅಲ್ಲಿಯವರೆಗೂ ಕೇವಲ ಇಪ್ಪತ್ತೈದು ಪೈಸೆಯಷ್ಟೇ ಬಳಕೆಯಿಂದ ನಾಪತ್ತೆಯಾಗಿದೆ ಎಂದು ಭಾವಿಸಿದ್ದ ನನಗೆ, ಐವತ್ತು ಪೈಸೆಯೂ ಬದುಕಿದ್ದೂ ಸತ್ತಂತಿದೆ ಎಂಬುದು ಮನದಟ್ಟಾಗಿದ್ದು ಆವಾಗಲೇ.

ಇದೀಗ ನಮ್ಮ ಮನೆಗೆ ಪ್ರತಿ ದಿನ ಬರುವ ಸ್ಥಳೀಯ ದಿನಪತ್ರಿಕೆಯ ಮುಖಬೆಲೆ ಗಮನಿಸಿದಾಗಲೆಲ್ಲ ಎಳನೀರು ಮಾರುವವನು ಹಿಂತಿರುಗಿಸಿದ ಐವತ್ತು ಪೈಸೆ ನಾಣ್ಯ ನೆನಪಾಗುತ್ತದೆ. ಯಾಕಂದ್ರೆ ಆ ದಿನಪತ್ರಿಕೆಯ ಮುಖಬೆಲೆ ಒಂದು ರೂಪಾಯಿ ಐವತ್ತು ಪೈಸೆ. ಬಿಡಿಪ್ರತಿ ಕೊಳ್ಳುವವನು ಮತ್ತು ಮಾರುವವನ ನಡುವೆ

ಐವತ್ತು ಪೈಸೆಯ ಸಂದಿಗ್ಧ ಎದುರಾಗುತ್ತಿರಬಹುದೇ ಎಂದು ಪ್ರಶ್ನಿಸಿಕೊಳ್ಳುತ್ತೇನೆ. ನನ್ನ ಪ್ರಶ್ನೆಗೆ ಬೇರೆ ಮೂಲಗಳಿಂದ ಉತ್ತರ ದೊರೆಯಲಾರಂಭಿಸಿದೆ.



ಚಿತ್ರ ಕೃಪೆ: ಉದಯವಾಣಿ

ಅಪರೂಪಕ್ಕೊಮ್ಮೊಮ್ಮೆ ನಾನಾ ವೇಷಭೂಷಣಗಳಲ್ಲಿ ಭಿಕ್ಷೆ ಬೇಡಲು ಬರುವವರಿಗೆ, 'ಚಿಲ್ರೆ ಇದ್ರೆ ಕೊಟ್ಟು ಕಳುಸ್ರೋ' ಅನ್ನುತ್ತಿದ್ದ ನಮ್ಮಮ್ಮನೂ ಇದೀಗ ಆ ಮಾತು ಹೇಳುವ ಮುನ್ನ ಒಂದಿಷ್ಟು ಯೋಚಿಸಲೇಬೇಕಾಗಿದೆ. ಯಾಕಂದ್ರೆ ಭಿಕ್ಷೆ ಬೇಡುವವರು ಕೂಡ ಒಮ್ಮೊಮ್ಮೆ ಚಿಲ್ಲರೆ ಕೊಟ್ಟರೆ ತೆಗೆದುಕೊಳ್ಳದೆ ಮುಖ ತಿರುಗಿಸಿಕೊಂಡು ಹೋಗುವುದು ಅಮ್ಮನ ಗಮನಕ್ಕೂ ಬಂದಿದೆ. ಚಿಲ್ಲರೆ ಎಂಬುದು ದಿನೇ ದಿನೇ ಮೌಲ್ಯ ಕಳೆದುಕೊಳ್ಳುತ್ತಿರುವ ಹೊತ್ತಲ್ಲಿ, ಚಿಲ್ಲರೆ ಹೊಂದಿಸುವುದು ದೊಡ್ಡ ಸಮಸ್ಯೆಯಾಗಿಯೇ ತೋರುತ್ತಿದೆ. ಆದರೆ ಮೊದಲೆಲ್ಲ ಕೇವಲ ಪೈಸೆಗಳನ್ನಷ್ಟೆ ಒಳಗೊಂಡಿರುತ್ತಿದ್ದ ಚಿಲ್ಲರೆಯು ಇದೀಗ ಒಂದು, ಎರಡು, ಐದು

ರೂಪಾಯಿಗಳನ್ನೆಲ್ಲ ನುಂಗಿಕೊಂಡು ನೂರರ ನೋಟನ್ನೂ ತನ್ನೊಳಗೆ ಸುಲಭವಾಗಿ ಒಳಗೊಳ್ಳಲಾರಂಭಿಸಿದೆ. ಚಿಲ್ಲರೆಯ ವ್ಯಾಪ್ತಿ ವಿಸ್ತರಿಸಿದಂತೆಲ್ಲ ಕೆಳಗಿನ ಸಾಲಿನಲ್ಲಿ ನಿಲ್ಲುವ ಐವತ್ತು ಪೈಸೆ, ಒಂದು, ಎರಡು ರೂಪಾಯಿಗಳೆಲ್ಲ ಒಂದೊಂದಾಗಿ ತಮ್ಮ ಅಸ್ತಿತ್ವ ಕಳೆದುಕೊಳ್ಳಲು ಅಣಿಯಾಗಿ ನಿಂತಿರುವಂತೆ ಭಾಸವಾಗುತ್ತಿದೆ.

ಒಂದು, ಎರಡು ರೂಪಾಯಿಯ ವಹಿವಾಟು ನಡೆಸಲು ಯಾವುದಾದರೂ ಅಂಗಡಿಗೆ ಹೋದರೆ, ಅವರು ಕೇಳುವ ಮೊದಲ ಪ್ರಶ್ನೆಯೇ 'ಚಿಲ್ರೆ ಇದ್ಯಾ?'. ಇಲ್ಲ ಅಂದ್ರೆ, 'ಚಿಲ್ರೆ ಬೇಕು ಸಾರ್' ಅಂತ ಸಾಗಾಕುವರು. ಸ್ವಲ್ಪ ಪರಿಚಿತರಾದ್ರೆ, 'ಮುಂದಿನ ಸಲ ಬಂದಾಗ ಕೊಡಿ' ಅನ್ನಲೂಬಹುದು. ವಿಧಿಯಿಲ್ಲದೆ ಚಿಲ್ಲರೆ ಸಿಗದ ಕಾರಣಕ್ಕೆ ಆ ಕ್ಷಣಕ್ಕೆ ಬೇಡವಾದದ್ದೇನನ್ನೋ ಕೊಂಡುಕೊಂಡು ಬಿಡುತ್ತೇವೆ. ಇಲ್ಲೂ ನಮ್ಮ ಕಣ್ಣಿಗೆ ರಾಚುವ ಸಂಗತಿಯೊಂದಿದೆ. ಚಿಲ್ಲರೆ ವ್ಯಾಪಾರದ ವ್ಯಾಪ್ತಿಗೆ ಒಳಪಡುವ ಅಂಗಡಿಗಳ ಪಾಲಿಗೂ ಚಿಲ್ಲರೆ ಎಂದರೆ ಒಂದು ಎರಡು ರೂಪಾಯಿಯಾಗಿರದೆ ಅವುಗಳಿಗಿಂತಲೂ ಹೆಚ್ಚಿನ ಮೌಲ್ಯದ ವಹಿವಾಟೇ ಆಗಿಬಿಟ್ಟಿದೆ. ಹಾಗಾಗಿಯೇ ಚಿಲ್ಲರೆ ವ್ಯಾಪಾರಿಗಳೂ ಒಂದು ಎರಡು ರೂಪಾಯಿಯ ವ್ಯಾಪಾರ ನಡೆಸಲು ಬರುವ ಗ್ರಾಹಕರ ಕುರಿತು ಅಸಡ್ಡೆ ತೋರುವುದು ಮಾಮೂಲಾಗಿದೆ.

ಚಿಲ್ಲರೆಗೆ ಸಂಬಂಧಿಸಿದ ವಾಗ್ವಾದಗಳು ಹೆಚ್ಚೆಚ್ಚು ಜರುಗುವ ಮತ್ತೊಂದು ಸ್ಥಳವೆಂದರೆ ಬಸ್. ಪ್ರತಿ ಬಾರಿ ಟಿಕೆಟ್ ಪಡೆಯುವಾಗಲೂ ಚಿಲ್ಲರೆಯ ಮಹತ್ವ ಅಥವಾ ಅದರೆಡೆಗಿರುವ ಅಸಡ್ಡೆ ಎರಡರ ಮುಖ ದರ್ಶನವೂ ಆಗಿ ಬಿಡುತ್ತದೆ. ಬಹಳಷ್ಟು ಕಂಡಕ್ಟರ್‌ಗಳು ನೀಡಬೇಕಿರುವ ಚಿಲ್ಲರೆಯನ್ನು ಟಿಕೆಟ್ ಪಡೆಯುವ ವೇಳೆ ಕೊಡದೇ ಟಿಕೆಟ್ನ ಹಿಂಬದಿಯಲ್ಲಿ ಚಿಲ್ಲರೆ ಮೊತ್ತ ನಮೂದಿಸಿ 'ಆಮೇಲೆ ಇಸ್ಕೊಳಿ' ಅಂದುಬಿಡುತ್ತಾರೆ. ಕೆಲವರಂತೂ ಒಂದು ಎರಡು ರೂಪಾಯಿ ಚಿಲ್ಲರೆ

ಹಿಂತಿರುಗಿಸಬೇಕಿದ್ದರೆ, ಅದು ಲೆಕ್ಕಕ್ಕೇ ಇಲ್ಲವೇನೊ ಎಂಬಂತೆ ಸುಮ್ಮನಾಗಿಬಿಡುತ್ತಾರೆ. 'ಅಯ್ಯೋ ಒಂದ್ರೂಪಾಯಲ್ವ, ಅದ್ನೇನು ಕೇಳೋದು' ಅನ್ನುವ ಮನಸ್ಥಿತಿಗೆ ನಾವೂ ಒಗ್ಗಿ ಹೋಗಿರುವುದರಿಂದ ಆ ವಿಷಯವನ್ನು ಎಳೆಯದೆ ಸುಮ್ಮನಾಗಿ ಬಿಡುತ್ತೇವೆ. ಇದಕ್ಕೆ ಎರಡು ಬದಿಯಲ್ಲೂ ಅಪವಾದಗಳು ಇರುವುದೂ ಸುಳ್ಳಲ್ಲ. ತನ್ನ ಬಳಿ ಒಂದು ರೂಪಾಯಿ ಚಿಲ್ಲರೆಯನ್ನೂ ಉಳಿಸಿಕೊಳ್ಳದೆ ಪ್ರಾಮಾಣಿಕವಾಗಿ ಹಿಂದಿರುಗಿಸುವ ಕಂಡಕ್ಟರ್ಗಳು ಇರುವಂತೆಯೇ, ತಮಗೆ ಸಲ್ಲಬೇಕಿರುವ ಚಿಲ್ಲರೆಯನ್ನು ಪಡೆಯುವುದು ತಮ್ಮ ಹಕ್ಕೆಂದು ಭಾವಿಸಿ ಶತಾಯಗತಾಯ ಚಿಲ್ಲರೆ ವಸೂಲಿ ಮಾಡಿಕೊಳ್ಳುವವರೂ ಉಂಟು. ಇಲ್ಲಿ 'ತಪ್ಪು ಯಾರದ್ದು' ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ. ಚಿಲ್ಲರೆಯ ಅಗತ್ಯ ಎದುರಾಗುತ್ತದೆ ಎಂಬುದು ತಿಳಿದಿದ್ದರೂ, ಚಿಲ್ಲರೆ ಪೇರಿಸಿಕೊಂಡು ಇಟ್ಟುಕೊಳ್ಳದ ನಮ್ಮದೋ ಅಥವಾ 'ಚಿಲ್ರೆ ಇಲ್ಲ ಕಣ್ರಿ' ಅಂತ ಸಿಡಿಮಿಡಿಗೊಳ್ಳುವ ವ್ಯಾಪಾರಸ್ಥರು, ಬಸ್ ಕಂಡಕ್ಟರ್ಗಳದ್ದೋ ಹೇಳುವುದು ಕಷ್ಟ. ಚಿಲ್ಲರೆ ಕುರಿತು ಹೆಚ್ಚು ತಲೆ ಕೆಡಿಸಿಕೊಳ್ಳದವರೂ ಒಮ್ಮೊಮ್ಮೆ ಕೋಪೋದ್ರಿಕ್ತರಾಗಬೇಕಾದ ಸನ್ನಿವೇಶ ಗಳೂ ಎದುರಾಗಿ ಬಿಡುತ್ತವೆ. ತಮ್ಮ ಬಳಿ ಚಿಲ್ಲರೆ ಇದ್ದೂ ಕೊಡಬಯಸದವರ ವರ್ತನೆ ಗಮನಿಸಿದಾಗ, 'ನಾವು ಮೋಸ ಹೋಗ್ತಿದ್ದಿವೇನೊ' ಎನ್ನುವ ಅಳುಕೂ ಕಾಡುತ್ತದೆ. 'ಏನೇ ಆದ್ರೂ ಚಿಲ್ರೆ ಬಿಡ್ಬೇಡ' ಅಂತ ಮನಸ್ಸನ್ನು ಪುಸಲಾಯಿಸುತ್ತದೆ.

ಇಬ್ಬರು ಮೂವರಿಗೆ ಹತ್ತು ರೂಪಾಯಿಯ ನೋಟು ಕೊಟ್ಟು ನೀವೇ ಚಿಲ್ಲರೆ ಹೊಂದಿಸಿಕೊಳ್ಳಿ ಎಂದು ಸಾಗಾಕುವ ಕಂಡಕ್ಟರ್, ಚಿಲ್ಲರೆಯ ನೆವದಲ್ಲೇ ಕುದುರುವ ಹೊಸ ಸಂಬಂಧಗಳು, ಹುಟ್ಟಿಕೊಳ್ಳುವ ಕ್ಷುಲ್ಲಕ ಸಂಘರ್ಷಗಳಿಗೆಲ್ಲ ಬಸ್ ನಿಲ್ದಾಣಗಳು ಆಗಾಗ ಸಾಕ್ಷಿಯಾಗುವುದೂ ಉಂಟು.

ಚಿಲ್ಲರೆ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿರುವ ಸ್ನೇಹಿತನೊಬ್ಬ ಎಲ್ಲಾದರೂ ಹೋಗಬೇಕೆಂದರೆ ಬಸ್ ಟಿಕೆಟ್ಟಾಗಿ ಚಿಲ್ಲರೆ ಹೊಂದಿಸಲು ಮತ್ತು ನಾವೆಲ್ಲಿಗಾದರೂ ಬಸ್ ಪ್ರಯಾಣ ಕೈಗೊಳ್ಳುವುದಿದ್ದರೆ 'ಚಿಲ್ರೆ ಇದ್ಯಾ, ಚಿಲ್ರೆ ಬೇಕಾ' ಅಂತ ಕಾಳಜಿ ತೋರುವುದನ್ನು ಕಂಡಾಗಲೆಲ್ಲ ಇದು 'ಚಿಲ್ರೆ ಬುದ್ಧಿ' ಎಂಬ ಬೈಗುಳದ ಬೇರನ್ನೇ ಸಡಿಲಿಸುವಂತಹ ನಿದರ್ಶನವೆನಿಸುತ್ತದೆ.

ಚೂರುಪಾರು ಅನುಕೂಲಸ್ಥರ ಪಾಲಿಗೆ ನಗಣ್ಯವಾಗಿ ತೋರುವ ಚಿಲ್ಲರೆ, ಸೀಮಿತ ಆದಾಯದಲ್ಲಿ ಬದುಕು ರೂಪಿಸಿಕೊಳ್ಳುವವರ ಪಾಲಿಗೆ ಅಮೂಲ್ಯವೇ. ಚಿಲ್ಲರೆಯ ಅಪಮೌಲ್ಯವಾದಂತೆಲ್ಲ ನಮ್ಮ ಜೀವನಮಟ್ಟ ಸುಧಾರಿಸುತ್ತಿದೆ ಎಂಬ ಭ್ರಮೆಗೆ ಒಳಪಡುವುದೋ ಅಥವಾ ನಮ್ಮೆಲ್ಲರ ದುಡಿಮೆ ಮತ್ತು ಬದುಕಿನ ಮೌಲ್ಯವೇ ಕುಸಿಯುತ್ತಿದೆ ಎಂದು ಮರುಗುವುದೋ ತಿಳಿಯುವುದಿಲ್ಲ.

(ಜನವರಿ 2017, ಉದಯವಾಣಿ)



# ಏನ್ ಸಮಾಚಾರ?

ಇತ್ತೀಚೆಗೆ ಸ್ನೇಹಿತರೊಂದಿಗೆ ಟ್ರಿಪ್ ಹೋಗಿದ್ದೆ. ನಮ್ಮೊಂದಿಗೆ ಸ್ನೇಹಿತರೊಬ್ಬರ ಪುತ್ರನೂ ಇದ್ದ. ಅವನ ಹೆಸರು ನವೀನ್ ಕುಮಾರ್. ಮೂರು ವರ್ಷದ ಅವನನ್ನು ಮಾತನಾಡಿಸುವಾಗ, 'ಕುಮಾರ ಏನು ಸಮಾಚಾರ?' ಅಂತ ಮತ್ತೊಬ್ಬರು ಪ್ರಾಸಬದ್ಧವಾಗಿ ಕೇಳಿದರು. ಅದಕ್ಕವನು ಏನೂ ಯೋಚಿಸದೇ 'ಕೂತಿದೀನಿ' ಅಂದ. ಅವನ ಉತ್ತರ ಕೇಳಿ ನಮಗೆಲ್ಲ ಅಚ್ಚರಿಯಾಗುವುದರೊಂದಿಗೆ ನಗು ಸಹ ಬಂತು.
ಸಾಮಾನ್ಯವಾಗಿ ನಮಗೆ ಯಾರಾದರೂ, 'ಏನ್ ಸಮಾಚಾರ?' ಅಂತ ಕೇಳಿದ್ರೆ, ಒಂದೋ 'ಏನೂ ಇಲ್ಲ' ಅಂತೀವಿ. ಇಲ್ಲಾಂದ್ರೆ 'ನೀವೇ ಹೇಳ್ಬೇಕು' ಅಂತಲೂ ಪ್ರತಿಕ್ರಿಯಿಸುತ್ತೇವೆ. 'ಏನೂ ಇಲ್ಲ' ಅಂದ ಕೂಡಲೇ 'ಏನಾಯ್ತೆಲ್ಲ?' ಅಂತ ಕಿಚಾಯಿಸುವವರೂ ಇದ್ದಾರೆ.

ಈ 'ಏನ್ ಸಮಾಚಾರ?' ಅನ್ನೋ ಕಿರಿಕಿರಿಯನ್ನುಂಟು ಮಾಡುವ ಪ್ರಶ್ನೆಗೆ ಕುಮಾರನ ಸಮರ್ಥ ಉತ್ತರ ಕೇಳಿ ದಂಗಾದ ಮೇಲೆ, ಇನ್ಮುಂದೆ ಯಾರಾದ್ರೂ 'ಏನ್ ಸಮಾಚಾರ?' ಅಂದ್ರೆ ಆ ಕ್ಷಣದಲ್ಲಿ ನಿಂತಿದ್ರೆ ನಿಂತಿದ್ದೀನಿ, ಕುಂತಿದ್ರೆ ಕುಂತಿದ್ದೀನಿ, ಮಲಗಿದ್ರೆ ನಿದ್ದೆ ಹೊಡಿತಿದೀನಿ ಅಂತಲೇ ಪ್ರತಿಕ್ರಿಯಿಸಬೇಕೆಂದು ನಿರ್ಧರಿಸಿದ್ದೀನಿ.

(ಮೇ 2016, ತುಷಾರ)



## ಲೈಬ್ರರಿಯಲ್ಲಿ ಸಿಕ್ಕ ಅಜ್ಜ

ಪ್ರತಿ ಭಾನುವಾರವೂ ಸಂಜೆ ಲೈಬ್ರರಿಗೆ ಹೋಗುವ ಅಭ್ಯಾಸವಿದೆ. ಕಳೆದ ಭಾನುವಾರವೂ ಲೈಬ್ರರಿಯಲ್ಲಿ ಕುಳಿತು ವಾರಪತ್ರಿಕೆಗಳನ್ನು ಓದುತ್ತಿದ್ದೆ. ಆಗ ಅಲ್ಲಿಗೆ ವಯೋವೃದ್ಧರೊಬ್ಬರು ಆಗಮಿಸಿದರು. ಲೈಬ್ರರಿಯಲ್ಲಿ ಜನಸಾಮಾನ್ಯರಿಗೆ ದೊರೆಯುವ ಸೌಲಭ್ಯಗಳು ಹಾಗು ಲೈಬ್ರರಿ ನಿರ್ವಹಣೆ ಮಾಡುವ ವೈಖರಿ ಕುರಿತು ಗ್ರಂಥಾಲಯದ ಸಿಬ್ಬಂದಿಯೊಬ್ಬರಿಂದ ಮಾಹಿತಿ ಪಡೆದುಕೊಳ್ಳುತ್ತಿದ್ದರು. ಆನಂತರ 'ನೀವೀಗ ಅನುಸರಿಸುತ್ತಿರುವ ವಿಧಾನ ತೀರಾ ಔಟ್ಡೇಟೆಡ್ ಆಗಿದೆ. ಲೈಬ್ರರಿ ನಿರ್ವಹಣೆಗೆ ಈಗ ಎಂತೆಂಥ ವಿಧಾನಗಳಿವೆ? ನೀವ್ಯಾಕೆ ಅವುಗಳನ್ನು ಅನುಸರಿಸಬಾರದು' ಅಂತೆಲ್ಲ ಪ್ರಶ್ನಿಸುತ್ತಿದ್ದರು. ಅಲ್ಲೇ ಇದ್ದ ನನ್ನೆಡೆಗೆ ನೋಡಿ, 'ನಾನು ಹೇಳ್ತಿರೋದು ಸರಿ ಅಲ್ವಾ' ಅಂತ ಕೇಳಿದ್ರು.

ನಾನು 'ಹೌದೌದು' ಅಂತ ತಲೆ ಅಲ್ಲಾಡಿಸಿ ಸುಮ್ಮನೆ ನನ್ನ ಪಾಡಿಗೆ ನಾನು ವಾರಪತ್ರಿಕೆ ಓದುವುದನ್ನು ಮುಂದುವರೆಸಿದೆ. ಲೈಬ್ರರಿಯಿಂದ ಹೊರ ನಡೆಯುವ ಸಂದರ್ಭದಲ್ಲಿ ಆ ಅಜ್ಜ ಮತ್ತೆ ಎದುರಾದರು. ತಮ್ಮನ್ನು ತಾವು ಪರಿಚಯಿಸಿಕೊಂಡು ನನ್ನ ಹೆಸರು, ವೃತ್ತಿ ಹಿನ್ನೆಲೆ ಕುರಿತು ವಿಚಾರಿಸಿದರು.

ಆನಂತರ ಅವರ ಮಾತು ಮತ್ತೆ ಲೈಬ್ರರಿಯಲ್ಲಿನ ಅವ್ಯವಸ್ಥೆಯೆಡೆಗೆ ಹೊರಳಿತು. 'ಈ ಲೈಬ್ರರಿನಾ ಬ್ರಿಟಿಷರ ಕಾಲದಲ್ಲೇ ಕಟ್ಟಲಾಗಿದೆ. ಆಗಿದ್ದ ವ್ಯವಸ್ಥೆಯೇ ಈಗಲೂ ಇದೆ. ಅಬ್ಬಬ್ಬಾ ಅಂದ್ರೆ ಒಂದಷ್ಟು ಪುಸ್ತಕಗಳು, ಅವನ್ನಿಡುವ ರ್‍ಯಾಕ್‌ಗಳ ಸಂಖ್ಯೆ ಹೆಚ್ಚಾಗಿರಬಹುದಷ್ಟೇ. ಲೈಬ್ರರಿ ನಿರ್ವಹಣೆಗೆ ಈಗ ಎಂತೆಂಥ ವಿಧಾನಗಳಿವೆ ರೀ. ಇವ್ರು ಇನ್ನೂ ಯಾವ್ದೋ ಕಾಲ್ದಲ್ಲಿ ಇದ್ದಾರೆ. ಎಲ್ಲಾ ಬುಕ್ಗಳ್ಗೂ ಕೋಡಿಂಗ್ ಮಾಡಿ ಡಾಟಾಬೇಸ್ ಮೇಂಟೇನ್ ಮಾಡಿದ್ರೆ ಇಲ್ಲಿ ಯಾವ್ಯಾವ ಪುಸ್ತಕಗಳು ಇವೆ,

ಯಾವ್ಯಾವು ಡೆಲಿವರಿ ಆಗಿವೆ ಅನ್ನೋದ್ನೆಲ್ಲ ನಿಮಿಷದೊಳಗೆ ಹೇಳ್ಬಹುದು. ಜನಕ್ಕೆ ಬಿಡುವು ಸಿಗೋದೆ ಕಡಿಮೆ. ಅವರು ಈ ಲೈಬ್ರರಿಗೆ ಬಂದು ಪುಸ್ತಕ ಹುಡುಕೋದ್ರಲ್ಲೇ ಗಂಟೆಗಟ್ಟಲೆ ಟೈಮ್ ವೇಸ್ಟ್ ಮಾಡಿದ್ರೆ, ಓದೋದು ಯಾವಾಗ?' ಅಂತ ಕೇಳಿದ್ರು.

ಅದಕ್ಕೆ ನಾನು, 'ಸಾರ್ ನೀವು ಹೇಳೋದೆಲ್ಲ ಸರಿ. ಆದ್ರೆ ಇದು ಸರ್ಕಾರ ನಿರ್ವಹಿಸುವ ಲೈಬ್ರರಿ. ಇಲ್ಲಿ ಪುಸ್ತಕಗಳ ಆಯ್ಕೆ ಮತ್ತು ಖರೀದಿಯಲ್ಲೇ ದೊಡ್ಡ ಮಟ್ಟದಲ್ಲಿ ಗೋಲ್ಮಾಲ್ ನಡೆಯುತ್ತೆ ಅಂತಾರೆ. ಅಂಥದ್ರಲ್ಲಿ ಜನರಿಗೆ ಅನುಕೂಲ ಆಗುತ್ತೆ ಅಂತ ಇರೋ ವ್ಯವಸ್ಥೆನಾ ಬದಲಾಯಿಸ್ತಾರ? ಕಷ್ಟ ಸರ್' ಅಂತಂದೆ.

ಅದಕ್ಕವರು, 'ನೀವು ಏನೇ ಹೇಳಿ, ನಾನು ಮಾತ್ರ ಸುಮ್ಮನಿರೋ ಮನುಷ್ಯ ಅಲ್ಲ. ನಾನು ಜಪಾನ್, ಜರ್ಮನಿಯಲ್ಲೆಲ್ಲ ಕೆಲಸ ಮಾಡಿದವನು. ಅಲ್ಲಿನ ವ್ಯವಸ್ಥೆ ಎಷ್ಟು ಅಚ್ಚುಕಟ್ಟಾಗಿರುತ್ತೆ ಗೊತ್ತಾ? ಅವರು ಅನುಸರಿಸುತ್ತಿರೋ ವಿಧಾನನಾ ನಾವ್ಯಾಕೆ ಅಳವಡಿಸಿಕೊಳ್ಳಬಾರದು? ನಾನು ನಾಳೆನೇ ಮುಖ್ಯ ಗ್ರಂಥಾಲಯಾಧಿಕಾರಿಗೆ ಪತ್ರ ಬರೆಯುತ್ತೇನೆ. ಇಲ್ಲಿನ ವ್ಯವಸ್ಥೆ ಬದಲಾಯಿಸೋಕೆ ನನ್ನ ಕೈಲಾದ ಹೋರಾಟ ಮಾಡ್ತೀನಿ' ಅಂದ್ರು.

'ಸಾರ್, ನೀವೊಬ್ರು ಇಲ್ಲಿನ ಅವ್ಯವಸ್ಥೆ ವಿರುದ್ಧ ದನಿ ಎತ್ತೋದ್ಕಿಂತ ಇಲ್ಲಿಗೆ ಬರುವವರೆಲ್ಲ ಸಂಘಟಿತರಾಗಿ ಹೋರಾಡಿದ್ರೆ ಪ್ರಯೋಜನ ಆಗ್ಬಹುದೇನೊ' ಅಂದೆ.

'ರೀ, ಒಬ್ಬನಿಂದ ಏನೂ ಆಗಲ್ಲ ಅಂತ ಯಾಕೆ ಅಂದ್ಕೊಳ್ತೀರ? ನೀವಿನ್ನೂ ಯುವಕರಿದ್ದೀರಿ. ನಿಮ್ಮಂಥೋರು ಹೀಗಂದ್ರೆ ಹೇಗೆ? ಗಾಂಧಿ, ಬುದ್ಧ, ನೆಲ್ಸನ್ ಮಂಡೇಲ ಎಲ್ಲ ನಿಮ್ಮ ಹಾಗೆ ಯೋಚ್ನೆ ಮಾಡಿದ್ರೆ ಆಗ್ತಿತ್ತಾ? ನಾನಂತೂ ಸುಮ್ನೆ

ಇರೋ ಮನುಷ್ಯ ಅಲ್ಲ. ನಾಳೆನೇ ಗ್ರಂಥಾಲಯ ಇಲಾಖೆ ಅಧಿಕಾರಿಗಳಿಗೆ ಪತ್ರ ಬರೆಯುತ್ತೇನೆ. ನಿಮ್ಮ ಕಡೆಯಿಂದ ಸಲಹೆಗಳನ್ನು ಕೊಡುವುದಿದ್ದರೆ ಕೊಡಿ' ಅಂತ ನನ್ನ ಫೋನ್ ನಂಬರ್ ತೆಗೆದುಕೊಂಡರು.

ಅವರು ಎಂಜಿನಿಯರ್ ಆಗಿದ್ದವರು. ದೇಶ ವಿದೇಶಗಳಲ್ಲಿ ಕೆಲಸ ಮಾಡಿ ಇದೀಗ ಹಾಸನದಲ್ಲಿ ವಿಶ್ರಾಂತ ಜೀವನ ಸಾಗಿಸುತ್ತಿದ್ದಾರೆ. ಕೆಲ ಕಂಪನಿಗಳಿಗೆ ಸಲಹೆಗಾರರೂ ಆಗಿದ್ದಾರೆ. ಅವರಲ್ಲಿದ್ದ ಆತ್ಮಸ್ಥೈರ್ಯ ಹಾಗು ಬದ್ಧತೆ ಇನ್ನೂ ಇಪ್ಪತ್ತೈದು ದಾಟದ ನನ್ನನ್ನು ಸೆಳೆದದ್ದು ಮಾತ್ರ ಸುಳ್ಳಲ್ಲ. ಇವರನ್ನು ಕಂಡ ಮೇಲೆ ವಯಸ್ಸು ದೇಹಕ್ಕಷ್ಟೇ ಮನಸ್ಸಿಗಲ್ಲ ಎಂಬ ಮಾತು ಅರ್ಥಪೂರ್ಣವೆನಿಸಿತು.

(ಜೂನ್ 2014, ಕನ್ನಡಪ್ರಭ)



# ಮಕ್ಕಳ ಅಳಲು ಅರಿತ ಅಜ್ಜಿ

ಮೊನ್ನೆ ಪಾರ್ಕ್ ನಲ್ಲಿ ಗೆಳೆಯನೊಂದಿಗೆ ವಾಕ್ ಮಾಡುತ್ತಿದ್ದೆ. ನಮ್ಮ ಮುಂದೆ ಸಾಗುತ್ತಿದ್ದ ಅಜ್ಜಿಯರಿಬ್ಬರ ನಡುವಿನ ಮಾತುಕತೆ ಕಿವಿಗೆ ಬೀಳಲಾರಂಭಿಸಿತು.

'ಈಗಿನ್ ಕಾಲುದ್ ಮಕ್ಳಿಗೆ ಎಷ್ಟೆಲ್ಲ ಸೌಲಭ್ಯಗಳಿವೆ. ಒಂಚೂರೂ ಕಷ್ಟ ಪಡುವ ಹಾಗಿಲ್ಲ. ನಾವು ಚಿಕ್ಕವರಿದ್ದಾಗ ಕಾಲಿಗೆ ಹಾಕೋಕೆ ಒಂದೇ ಒಂದು ಜೊತೆ ಚಪ್ಲಿನೂ ಇರ್ಲಿಲ್ಲ. ಈಗ ಕಾಲೇಜಿಗೆ ಹೋಗೋ ಮೊಮ್ಮಗಳ ಬಳಿ ಹತ್ತಕ್ಕೂ ಹೆಚ್ಚು ಜೊತೆ ಚಪ್ಪಲಿಗಳಿವೆ. ತಿಂಗಳಿಗೆ ಕಡಿಮೆ ಅಂದ್ರೂ ಒಂದು ಜೊತೆ ತಗೊಳ್ತಾನೆ ಇರ್ತಾಳೆ' ಅಂತ ಒಬ್ಬರು ಅಂದ್ರು. ಅದಕ್ಕೆ ಪ್ರತಿಕ್ರಿಯಿಸಿದ ಮತ್ತೊಬ್ಬರು ಅಜ್ಜಿ, 'ಪಾಪ ಕಂಡ್ರಿ ಈಗಿನ್ ಮಕ್ಳು. ಅವ್ರುನ್ನ ನೋಡ್ತಿದ್ರೆ ತುಂಬಾ ಬೇಜಾರಾಗುತ್ತೆ. ಟ್ಯೂಷನ್ನು, ಸ್ಕೂಲು-ಕಾಲೇಜು, ಮನೆ, ಓದು ಇದಿಷ್ಟೇ ಅವರ ಬದುಕು ಅನ್ನೋ ಹಾಗಿದೆ. ಈಗಿನ್ ಮಕ್ಳಿಗೆ ಆಟ ಆಡೋಕು ಪುರುಸೊತ್ತಿಲ್ಲ. ನಾವು ಮಕ್ಳಾಗಿದ್ದಾಗ ಬಡತನ ಇದ್ರೂ, ಸೌಲಭ್ಯಗಳಿಲ್ಲದಿದ್ರೂ ಖುಷಿಯಾಗಿದ್ವಿ ಅಲ್ವಾ' ಅಂತಂದ್ರು.

ಇವರಿಬ್ಬರ ನಡುವಿನ ಮಾತುಕತೆ ವರ್ತಮಾನದ ವಿಪರ್ಯಾಸಕ್ಕೆ ಕನ್ನಡಿ ಹಿಡಿಯುತ್ತಿತ್ತು. ಈಗಿನ ಕಾಲದ ಮಕ್ಕಳ ಕುರಿತು ಟೀಕೆಗಳ ಮಳೆ ಸುರಿಸುವವರೇ ಹೆಚ್ಚಾಗಿರುವ ಸಂದರ್ಭದಲ್ಲಿ, ಅಜ್ಜಿಯೊಬ್ಬರು ಮಕ್ಕಳ ಸಮಸ್ಯೆಯ ಮೂಲ ಅರಿತು ಮಾತಾಡುತ್ತಿದ್ದದ್ದು ನಮ್ಮಲ್ಲಿ ಖುಷಿ ಮೂಡಿಸಿತು.

(ಡಿಸೆಂಬರ್ 2015, ಕನ್ನಡಪ್ರಭ)



## ಸೂಚನೆ

'ಕುಶಲೋಪರಿ' ಇ-ಪುಸ್ತಕವಾಗಿ ಮಾತ್ರ ದೊರೆಯಲಿದೆ. ಇದರ ಮುದ್ರಿತ ಪ್ರತಿಗಳು ಲಭ್ಯವಿರುವುದಿಲ್ಲ. ಪುಸ್ತಕ ನಿಮಗೆ ಮೆಚ್ಚುಗೆಯಾದಲ್ಲಿ ಅಥವಾ ಇದು ಓದಲು ಅರ್ಹವೆನಿಸಿದಲ್ಲಿ ಪುಸ್ತಕದ ಪಿಡಿಎಫ್ ಪ್ರತಿಯನ್ನು ನೀವು ಯಾರೊಂದಿಗಾದರೂ ಹಂಚಿಕೊಳ್ಳಬಹುದು. ಪುಸ್ತಕವನ್ನು ಉಚಿತವಾಗಿ ಆದರೂ ಓದಬಹುದು ಅಥವಾ ಕೆಳಗಿನ ಲಿಂಕ್ ಮೂಲಕ ₹ 20 ಪಾವತಿಸಿ ಮತ್ತಷ್ಟು ಇ-ಪುಸ್ತಕಗಳನ್ನು ಹೊರತರಲು ಬಯಸಿರುವ ಪ್ರಜೋದಯ ಪ್ರಕಾಶನವನ್ನು ಬೆಂಬಲಿಸಬಹುದು.

## ಹಣ ಪಾವತಿಸಲು ಈ ಲಿಂಕ್ ಬಳಸಿ

www.instamojo.com/prajodaya

## ಪ್ರಜೋದಯ ಪ್ರಕಾಶನದ ಪುಸ್ತಕಗಳು

**ಮೊದಲ ತೊದಲು (ಲೇಖನಗಳು)** ಶರತ್ ಎಚ್.ಕೆ. ಬೆಲೆ: ₹ 80

**ಕರಗದ ನಗು (ಕತೆಗಳು)** ಕಾವೇರಿ ಎಸ್.ಎಸ್. ಬೆಲೆ: ₹ 65

**ಸೋಲು ಗೆದ್ದವನದ್ದು! (ಕಾದಂಬರಿ)** ಮಂಜು ಬನವಾಸೆ ಬೆಲೆ: ₹ 150

**ಬೆಳಕಿನ ಬೇಲಿ (ನ್ಯಾನೋ ಕತೆಗಳು)** ಶರತ್ ಎಚ್.ಕೆ. ಬೆಲೆ: ₹ 60

* **ಗೋಡೆಗಳ ನಡುವೆ... (ಲೇಖನಗಳು)** ಶರತ್ ಎಚ್.ಕೆ. ಬೆಲೆ: ₹ 30

* **ಕುಶಲೋಪರಿ (ಲೇಖನಗಳು)** ಶರತ್ ಎಚ್.ಕೆ. ಬೆಲೆ: ₹ 20

* ಇ-ಪುಸ್ತಕ: ಮುದ್ರಿತ ಪ್ರತಿ ಲಭ್ಯವಿರುವುದಿಲ್ಲ

### ವಿಳಾಸ:

**ಪ್ರಜೋದಯ ಪ್ರಕಾಶನ,** ಗಂಧದ ಕೋಠಿ ಹಿಂಭಾಗ, ಗೋಕುಲ್ ಹೋಟೆಲ್ ರಸ್ತೆ,

ಕೆ.ಆರ್.ಪುರಂ, ಹಾಸನ-573201

✉: prajodayaprakashana@gmail.com
☎: 8792276742

www.facebook.com/prajodayaprakashana

### ಆನ್ ಲೈನ್ ಅಂಗಡಿ

www.instamojo.com/prajodaya

